

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೦ ಡಿಸೆಂಬರ್ ೨೦೦೪ ಸಂಚಿಕೆ : ೧೨

ಕರ್ನಾಟಕ ವಿಧಾನಸಭೆ ವಿರೋಧಪಕ್ಷದ ನಾಯಕರಾದ ಶ್ರೀ ಬಿ.ಎಸ್. ಯಡಿಯೂರಪ್ಪನವರ ಧರ್ಮಪತ್ನಿ ಲಿಂಗೈಕ್ಯ ಶರಣೆ ಮೈತ್ರಾದೇವಿಯವರ ಶಿವಗಣಾರಾಧನೆ ಅಂಗವಾಗಿ ಏರ್ಪಡಿಸಿದ್ದ ಧರ್ಮಸಭೆಯ ಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು.



ಕರ್ನಾಟಕ ಎಸ್.ಟಿ.ಎಫ್. ಮುಖ್ಯಸ್ಥ ಶ್ರೀ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಅವರನ್ನು ನವೆಂಬರ್ ೨೮ರಂದು ತುಮಕೂರಿನಲ್ಲಿ ನಡೆದ ಅಭಿನಂದನಾ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಶ್ರೀಮತಿ ಮಿರ್ಜಿ, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶ್ರೀ ಸಿ.ಜಿ. ಹೃಷಿಕೇಶ್, ಶಾಸಕರಾದ ಶ್ರೀ ಕೆ.ಎನ್. ರಾಜಣ್ಣ, ಶ್ರೀ ಎಸ್. ಶಿವಣ್ಣ, ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಕೈಗಾರಿಕೋದ್ಯಮಿ ಶ್ರೀ ಎನ್.ಆರ್. ಜಗದೀಶ್ ಮೊದಲಾದವರು ಉಪಸ್ಥಿತರಿದ್ದರು.



ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರು ವಿವಿಧ ಸಮಾರಂಭಗಳಲ್ಲಿ ಭಾಗವಹಿಸಿದ ಚಿತ್ರಗಳು

ಸಂಪಾದಕ
ಹೆಚ್.ವಿ. ವೀರಭದ್ರಯ್ಯ
☎ : 95816-2278052

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ
☎ : 95816-2283600

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
☎ : 95816-2282828
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪.
☎ : 95816-2282211

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೦ ಡಿಸೆಂಬರ್ ೨೦೦೪ ಸಂಚಿಕೆ : ೧೨

## ಒಳಪುಟಗಳಲ್ಲಿ..........



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/- |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ರೈತರ ಹರ್ಷ – ಕಾನೂನಿಗಿಂತ ದೊಡ್ಡವರಿಲ್ಲ ....

"ಮಂದೇನ ಕೊಟ್ಟೀತು, ಮನವೇನು ದಣಿದೀತು, ಮುಂಜಾನದಾಗ ಗಿರಿಮಲ್ಲಕೊಟ್ಟರೆ ಮನೆತುಂಬಿ ನಮ್ಮ ಮನತುಂಬಿ" ಎಂದವರು ಗ್ರಾಮಬಾಂಧವರು. ಹೌದು ಈ ಬಾರಿ ದೇವರು ಮಳೆ ಕೊಟ್ಟದ್ದರಿಂದ ಬೆಳೆ ಅದರಲ್ಲೂ ರಾಗಿ ಬೆಳೆ ಹುಲುಸಾಗಿ ಬಂದಿದೆ. ಹೊಲಗಳೆಲ್ಲ ರಾಗಿತೆನೆ ಮುಡಿದು ತೂಗುತ್ತಿವೆ. ಕಟಾವು ಹತ್ತಿರವಾಗುತ್ತಿದೆ. "ರಾಗಿ ತಂದೀರಾ, ಭಿಕ್ಷಕೆ ರಾಗಿ ತಂದೀರಾ" ಎನ್ನುತ್ತಾರೆ ಪುರಂದರದಾಸರು, ಕರ್ನಾಟಕದ ಬಹುಪಾಲು ಗ್ರಾಮೀಣ ಬಂಧು ಭಗಿನಿಯರ ಜೀವನಾಧಾರರಾಗಿ, ರಾಗಿ ಶ್ರಮಜೀವಿಗಳ ಜೀವದ್ರವ್ಯ. ಕನಕದಾಸರು ರಾಗಿಯ ಮಹಿಮೆಯನ್ನು ರಾಮಧಾನ್ಯ ಚರಿತೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಬೀಸುವ ಕಲ್ಲಿಗೆ ರಾಗಿಕಲ್ಲು, ರಾಗಿ ಬೀಸುವ ಕಲ್ಲೆಂದೇ ಹೆಸರು. ರಾಗಿಕಲ್ಲಿನ ಹಾಡುಗಳನ್ನು ಕೇಳಿದ ಕಿವಿ ಸೂತಕ ಮುಕ್ತವಾದೀತು. ಕನ್ನಡ ಭಾಷೆಯ ಮಾಧುರ್ಯವನ್ನು, ನಾದ-ಮೋದವನ್ನು, ಹೇಯಗುಣವನ್ನು ರಾಗಿಬೀಸುವ ಹಾಡುಗಳನ್ನು ಕೇಳಿದವರಿಗೇ ಗೊತ್ತು, ಸಕ್ಕರೆಯ ರೋಗಿಗಳ ಪಥ್ಯಾಹಾರವಾದ ರಾಗಿ ಕಬ್ಬಿಣದ ಜೀವಸತ್ವವನ್ನು ತುಂಬಿಕೊಂಡಿರುವ ಧಾನ್ಯವೆಂಬುದು ವಿಜ್ಞಾನಿಗಳು ಕಂಡುಕೊಂಡಿರುವ ಸತ್ಯ. "ಮುದ್ದೆಯಂಥ ಊಟವಿಲ್ಲ, ಸಿದ್ದಪ್ಪನಂತ ದೇವರಿಲ್ಲ" ಎಂಬ ಗಾದೆಯ ಹಿಂದೆ ರಾಗಿಯ ಜನಪ್ರಿಯತೆ ಇರುವುದನ್ನಿಲ್ಲಿ ಸ್ಮರಿಸಬಹುದು. ಮೂರು ವರ್ಷಗಳಿಂದ ಮಳೆಬಾರದೆ ಕಂಗೆಟ್ಟಿದ್ದ ರೈತಬಂಧು ರಾಗಿಬೆಳೆಯನ್ನು ಕಂಡು ಸಂತೋಷಿಸುತ್ತಿದ್ದಾನೆ.

"ಕಾನೂನಿಗಿಂತ ನಾವೇನೂ ದೊಡ್ಡವರಲ್ಲ" ಎಂದಿದ್ದಾರೆ ಸ್ವಾಮೀಜಿಗಳು – ಕಂಚಿ ಶ್ರೀಗಳ ಬಿಡುಗಡೆಗೆ ಆಗ್ರಹಿಸುವ ಸಂದರ್ಭದಲ್ಲಿ. "ಕಾನೂನಿಗಿಂತ ಸ್ವಾಮೀಜಿಗಳು ದೊಡ್ಡವರು; ಅವರಿಗೆ ಎಲ್ಲ ರೀತಿಯ ಸೌಲಭ್ಯ ಕೊಡಬೇಕು, ಅವರನ್ನು ವಿಚಾರಣೆಯಿಂದ ಕೈಬಿಡಬೇಕು. ಶಿಕ್ಷೆಯನ್ನು ಕಡಿಮೆ ಮಾಡಬೇಕು – ಎಂದು ನಾವ್ಯಾರು ಹೇಳುತ್ತಿಲ್ಲ. ಕಾನೂನು ಏನು ಹೇಳುತ್ತದೆಯೋ ಅದನ್ನು ಸಂಪೂರ್ಣ ಗೌರವಿಸುತ್ತೇವೆ. ಕಾನೂನಿಗಿಂತ ನಾವೇನೂ ದೊಡ್ಡವರಲ್ಲ" ಎಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಿರುವ ವಿವಿಧ ಮಠಗಳ ಸ್ವಾಮೀಜಿಗಳು ಈ ದೇಶದ ಕಾನೂನಿನ ಬಗ್ಗೆ ಎಂತಹ ಅಪಾರ ಗೌರವನ್ನಿಟ್ಟು ಕೊಂಡಿದ್ದಾರೆ ಎಂಬುದು ತಿಳಿಯುತ್ತದೆ. ನಮ್ಮ ರಾಜಕಾರಣಿಗಳು ತಮ್ಮ ಮೂಗಿನ ನೇರಕ್ಕೆ ಕಾನೂನನ್ನು ಬಳಸುತ್ತಿರುವ ಈ ದಿನಗಳಲ್ಲಿ ಧರ್ಮಪೀಠದ ಅಧ್ಯಕ್ಷರುಗಳು ವ್ಯಕ್ತಪಡಿಸಿರುವ ಅಭಿಪ್ರಾಯ ಆದರ್ಶನೀಯವಾದುದಾಗಿದೆ. ಕಂಚೀಶ್ರೀಗಳ ಮೇಲೆ ಬಂದಿರುವ ಆರೋಪವನ್ನು ನ್ಯಾಯಾಲಯ ತೀರ್ಮಾನಿಸುತ್ತದೆ. ಆದರೆ ಶ್ರೀಗಳನ್ನು ಬಂಧಿಸಿದ ರೀತಿಯ ಬಗ್ಗೆ, ಅವರನ್ನು ನಡೆಸಿಕೊಳ್ಳುತ್ತಿರುವ ಬಗ್ಗೆ ಆಕ್ಷೇಪಣೆ ಎಲ್ಲ ಕಡೆಯಿಂದ ವ್ಯಕ್ತವಾಗುತ್ತಿರುವುದು ವಿಚಾರಾರ್ಹವಾದುದಾಗಿದೆ.

'ಸಿದ್ದಗಂಗಾ' ನಲವತ್ತು ವರ್ಷಗಳನ್ನು ಈ ಸಂಚಿಕೆಯೊಂದಿಗೆ ಕಂಡುಂಡು ೨೦೦೫ ಜನವರಿ ಸಂಚಿಕೆಯೊಂದಿಗೆ ನಲವತ್ತೊಂದನೆಯ ವರ್ಷಕ್ಕೆ ಮುನ್ನಡೆಯುತ್ತಿದೆ. ಈ ನಲವತ್ತು ಸಂವತ್ಸರಗಳುದ್ದಕ್ಕೂ ಪತ್ರಿಕೆಯನ್ನು ತಮ್ಮ ಆಶೀರ್ವಾದದ ಶ್ರೀರಕ್ಷೆಯಲ್ಲಿ ಪೂಜ್ಯ ಶ್ರೀಗಳವರು ಕೈಹಿಡಿದು ನಡೆಸಿದ್ದಾರೆ. ಹಳೆಯ ವಿದ್ಯಾರ್ಥಿ ಸಂಘ ಪತ್ರಿಕೆಯ ಜೀವಜಲವಾಗಿ ಬೆನ್ನಿಗಿದ್ದು ಆತ್ಮವಿಶ್ವಾಸಕ್ಕೆ ಕಾರಣವಾಗಿದೆ. ಕಳೆದ ನಾಲ್ಕು ದಶಕಗಳಲ್ಲಿ ಪತ್ರಿಕೆಯ ಪ್ರಗತಿಗಾಗಿ ನಾಡಿನ ಪ್ರಬುದ್ಧ ಲೇಖಕರು, ಜಾಹಿರಾತುದಾರರು, ಆಜೀವ ಸದಸ್ಯರು, ಸಾಮಾನ್ಯ ಸದಸ್ಯರು, ಅಭಿಮಾನಿಗಳು ಸಹಕರಿಸಿದ್ದಾರೆ. ಸಂಪಾದಕರಾಗಿ ಬಹುಮಂದಿ ಹಿರಿಯ ವಿದ್ವಾಂಸರು ದುಡಿದಿದ್ದಾರೆ. ಸುದೀರ್ಘಕಾಲ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ ಶ್ರೀ ಪಂಡಿತ ಚೆನ್ನಪ್ಪ ಎರೇಸೀಮೆಯವರು ಪತ್ರಿಕೆಯನ್ನು ಅಗಲಿದ್ದಾರೆ. ಅವರ ಸೇವೆ ಸ್ಮರಣೆಯ, ಎಲ್ಲ ಸಂಪಾದಕರನ್ನೂ, ಈ ಸಂದರ್ಭದಲ್ಲಿ ಸ್ಮರಿಸುತ್ತದೆ ಪತ್ರಿಕೆ.

ಪತ್ರಿಕೆಯ ಪ್ರಕಾಶನ ಸಮಿತಿಯವರು, ಸಲಹಾ ಸಮಿತಿಯವರು, ಹಳೆಯ ವಿದ್ಯಾರ್ಥಿಗಳ ಸಂಘದ ಕಾರ್ಯಕಾರೀ ಸಮಿತಿಯವರು ಕಾಲಕಾಲಕ್ಕೆ ಸಲಹೆ ಸೂಚನೆ ಮಾರ್ಗದರ್ಶನಮಾಡುತ್ತ ಬಂದಿರುವುದನ್ನು, ಅಂದ ಚೆಂದದ ಮುದ್ರಣಕ್ಕೆ ಹೆಸರಾದ ಬೆಂಗಳೂರಿನ ಗೀತಾಂಜಲಿ ಗ್ರಾಫಿಕ್ಸ್ ಮುದ್ರಣಾಲಯದವರನ್ನು ಇಲ್ಲಿ ಸ್ಮರಿಸಲು ಸಂತೋಷಿಸುತ್ತದೆ 'ಸಿದ್ಧಗಂಗಾ'.

– ಸಂಪಾದಕ







## ತಾಳುವಿಕೆಗಿಂತ ತಪವು ಇಲ್ಲ

"ಏಳು ಘಂಟೆಗೆ ಬರ್ತೇವೆ ಎಂದಿದ್ದರು. ಏಳುವರೆಯಾಗುತ್ತ ಬಂತು. ಅಲ್ಲಿ ಜನರೆಲ್ಲ ಕಾಯುತ್ತಿದ್ದಾರೆ. ಯಾವಾಗ ಹೊರಡುತ್ತಾರೆ?" ವಯೋವೃದ್ಧರೊಬ್ಬರು ಮೊನ್ನೆ ನಮ್ಮ ಕಾರ್ಯಾಲಯದ ಮುಂದೆ ತಮ್ಮ ಆತಂಕವನ್ನು, ಅವಸರವನ್ನು, ನೆರೆದಿದ್ದ ಭಕ್ತಾದಿಗಳ ಮುಂದೆ ಆಡಿಕೊಳ್ಳುತ್ತಿದ್ದುದು ನಮ್ಮ ಕಿವಿಗೆ ಬಿತ್ತು. ನಮ್ಮ ಸಿಬ್ಬಂದಿಯವರು "ಇನ್ನೇನು ಹೊರಡುತ್ತಾರೆ, ಸ್ವಲ್ಪ. ತಾಳಿ, ಶ್ರೀಗಳವರಿಗೆ ದೇಹಾಲಸ್ಯವಾಗಿದೆ, ವಿಶ್ರಾಂತಿಯಲ್ಲಿದ್ದಾರೆ. ಅವಸರಿಸಬೇಡಿ ಎನ್ನುತ್ತಿದ್ದುದು ಕೇಳಿಸಿತು. ಅಂದು ಬೆಳಗಿನ ಆರು ಘಂಟೆಗೇ ಪೂಜಾದಿಗಳನ್ನು ಮುಗಿಸಿಕೊಂಡು ಸಂಸ್ಕೃತ ಮಹಾವಿದ್ಯಾಲಯದಲ್ಲಿ ವಿದ್ಯಾಧಿದೇವತೆ ಶ್ರೀ ಶಾರದಾದೇವಿಯ ವಿಗ್ರಹ ಪ್ರತಿಷ್ಠಾನ ಮುಗಿಸಿಕೊಂಡು ಕಾರ್ಯಾಲಯಕ್ಕೆ ಬಂದಾಗ ಭಕ್ತಾದಿಗಳು ಅವರವರ ಕಾರ್ಯಕ್ರಮಕ್ಕೆ ನಮ್ಮನ್ನು ಕರೆದುಕೊಂಡು ಹೋಗಲು ಬಂದಿದ್ದರು. ಎಲ್ಲರೂ ನಿರೀಕ್ಷೆಯಲ್ಲಿದ್ದ ಸಂದರ್ಭ. ಆದರೆ ಆ ವಯೋವೃದ್ಧರು ತಾಳ್ಮೆ ಕಳೆದುಕೊಂಡಿದ್ದಂತೆ ಭಾಸವಾಯಿತು. ಸಮಾಧಾನ ಮಾಡಲು ಪ್ರಯತ್ನಿಸಿದ ಕಾರ್ಯಾಲಯದ ಸಹಾಯಕರೊಡನೆ ಅಸಭ್ಯವಾಗಿ, ಅಸಂಸ್ಕೃತವಾಗಿ ಸಂಭಾಷಿಸುತ್ತಿದ್ದುದು ಕೇಳಿಸಿತು. ವಿಶ್ರಾಂತಿಯಲ್ಲಿದ್ದ ನಮಗೆ ತುಂಬಾ ಬೇಸರ, ನೋವುಂಟಾಯಿತು. ಸಮಯವನ್ನು ದೇವರೆಂದೇ ಪರಿಭಾವಿಸುವ, ಪರಿಪಾಲಿಸುವ, ಗೌರವಿಸುವ ನಮಗೆ ಇಂತಹ ಅನುಭವಗಳಿಂದ ತುಂಬಾ ವೇದನೆಯಾಯಿತು. ಎಂದೂ, ಯಾವ ಸಂದರ್ಭದಲ್ಲಿಯೂ, ನೂರಾರು ಕಿ.ಮೀ. ದೂರದ ಸಭೆ, ಸಮಾರಂಭ, ಪೂಜೆ ಮುಂತಾದವುಗಳಿಗೆ ತಡವಾಗಿ ಹೋದವರಲ್ಲ ನಾವು. ತಡವಾಗುವುದಿದ್ದರೆ ಪೂರ್ವಸೂಚನೆ ಕೊಟ್ಟಿರುವುದುಂಟು. ಹೀಗಿರುವಾಗ, ದೇಹಾಲಸ್ಯದಿಂದ ಹತ್ತಿಪ್ಪತ್ತು ನಿಮಿಷಗಳು ತಡವಾದದ್ದಕ್ಕೆ ಆ ವೃದ್ಧರು ತಾಳ್ಮೆ ಕಳೆದುಕೊಂಡದ್ದನ್ನು ಕಂಡು ನಮಗೆ "ಲೋಕದ ಡೊಂಕ ನೀವೇಕೆ ತಿದ್ದುವಿರಿ ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ", ಎಂಬ ಬಸವಣ್ಣನವರ ವಚನ ನೆನಪಾಯಿತು. ತಾವೆಂದೂ ಸಮಯ ಭಂಗ ಮಾಡಿಲ್ಲವೆಂಬಂತೆ ಮಾತನಾಡುತ್ತಿದ್ದ ಆ ವೃದ್ಧರ ಬಗ್ಗೆ ಕನಿಕರ ಉಂಟಾಯಿತು. ದೇಹಾಲಸ್ಯವಿದ್ದರೂ ತಕ್ಷಣವೇ ಎದ್ದು ಅವರ ಕಾರ್ಯಕ್ರಮಕ್ಕೆ ಹೊರಟುಬಿಟ್ಟೆವು. ಕಾರ್ಯಾಲಯದ ಸಿಬ್ಬಂದಿಯವರ ಧರ್ಮಸಂಕಟವನ್ನೂ ಗಮನಿಸದಿರುವಂತಿಲ್ಲ. ಅವರು ನಮ್ಮ ಆದೇಶವನ್ನೂ ಪಾಲಿಸಬೇಕು, ಭಕ್ತಾದಿಗಳ ಒತ್ತಡವನ್ನೂ, ಆಗ್ರಹವನ್ನೂ ಸಹಿಸಿಕೊಳ್ಳಬೇಕು. ನಮಗೆಷ್ಟು ಅನಾರೋಗ್ಯವಿದ್ದರೂ, ಕಾರ್ಯಭಾರಗಳ ಒತ್ತಡಗಳಿದ್ದರೂ, ಶ್ರೀ ಮಠದ ಬಗ್ಗೆ ಮತ್ತು ಸಂಸ್ಥೆಯ ಸೇವೆಯ ಬಗ್ಗೆ ಆದರಾಭಿಮಾನಗಳನ್ನು ಅವಿಚ್ಛಿನ್ನವಾಗಿ ನಂಬಿ ನಡೆದುಕೊಳ್ಳುತ್ತಿರುವ ಭಕ್ತಾದಿಗಳ "ಪ್ರೀತಿ ಪ್ರೇಮಗಳ ಹಿಂಸೆ"ಯನ್ನು ಸಹಿಸಿಕೊಳ್ಳಲೇಬೇಕಾಗಿದೆ. "ತಾಳುವಿಕೆಗಿಂತ ತಪವು ಇಲ್ಲ" ಎಂಬುದೇ ಸಂಸ್ಥೆಯ ಜೀವಧನವೆಂದೇ ಭಾವಿಸಿದ್ದೇವೆ.

*

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ವೊಟ್ಟೆಯ ತಲೆಯಲ್ಲಿ ಎಂಟಾನೆ ಹುಟ್ಟಿದ್ದ ಕಂಡೆನಯ್ಯ*
*ಆವಕ್ಕೆ ನಂಟರು ಆರೇಳೆಂಟು ಹತ್ತು ನೋಡಾ*
*ವೊಟ್ಟೆಯ ತಲೆಯಲ್ಲಿ ಉರಿಲಿಂಗ ಹುಟ್ಟಲು*
*ಎಂಟಾನೆ ಸತ್ತವು; ನಂಟರು ಕೆಯ್ಯ ಬಿಟ್ಟರು*
*ವೊಟ್ಟೆಯ ತಲೆಯ ಮೆಟ್ಟನಿಂತು*
*ಉರಿಯ ಪುರುಷನ ನೆರೆದು*
*ಕಂಟಕಂಗಳ ಗೆಲಿದು*
*ಸಂಸಾರ ಸಾಗರವ ದಾಂಟಿದೆನು ಕಾಣಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.*

ಅಹಂಕಾರದಿಂದ ಎತ್ತಿದ ಶಿರವುಳ್ಳ ಜೀವನ ಜ್ಞಾನವೆಂಬ ಎತ್ತಿದ ಶಿರಸ್ಸಿನಲ್ಲಿ ಅಷ್ಟಮದಗಳ ವರ್ತನೆಯುಂಟಾಗಿರುವುದನ್ನು ಸುಜ್ಞಾನೋದಯವಾದ ಶರಣನು ಜ್ಞಾನದೃಷ್ಟಿಯಿಂದ ನಿದರ್ಶನವಾದನು. ಆ ಅಷ್ಟಮದಗಳಿಗೆ ಅರಿಷಡ್ವರ್ಗ ಸಪ್ತವ್ಯಸನ ಸಂಯುಕ್ತವಾಗಿ ಅಷ್ಟಮದ ದಶಮಾರುಗಳೆ ಬಂಧುಜನರಾಗಿದ್ದಾರೆ.

ಆ ಅತ್ಯಹಂಕಾರಯುಕ್ತವಾದ ಜೀವನ ಅಜ್ಞಾನವೆಂಬ ಶಿರದಲ್ಲಿ ಕರ್ಮಗಳಿತದಿಂದ ಎತ್ತಲು ಕಾಲಾನುಕಾಲಕ್ಕೆ ಸುಜ್ಞಾನೋದಯವಾಗಿ ಜ್ಯೋತಿರ್ಮಯಲಿಂಗ ಉದಯವಾದರೆ, ಅಷ್ಟಮದಗಳ ವರ್ತನೆ ನಷ್ಟವಾಗಿ, ಅಷ್ಟವಿಧ ಭಕ್ತಿ ಸ್ವರೂಪ ತಾಳಿ, ಕರಣಗಳ ವರ್ತನೆಯು ಮಂತ್ರಲಿಂಗ ಸಂಬಂಧದಿಂದ ನಿವೃತ್ತಿಯಾಗಲು, ಜೀವನ ಅಜ್ಞಾನವೆಂಬ ಶಿರಸ್ಸನ್ನು ಜ್ಞಾನ ಕ್ರಿಯಾಚರಣೆಯಿಂದ ಶುದ್ಧಿಮಾಡಿ, ಜ್ಯೋತಿರ್ಮಯ ಲಿಂಗದಲ್ಲಿ ಸಮರಸಗೊಂಡು, ಜನನ ಮರಣಗಳೆಂಬ ವಿಘ್ನಗಳನ್ನು ಜಯಿಸಿ, ಕಾಯ ಜೀವ ಪುತ್ರ ಮಿತ್ರ ಕಳತ್ರಾದಿ ಸಂಸೃತಿಯೆಂಬ ಸಮುದ್ರವನ್ನು ದಾಟಿದನು ಶಿವಶರಣನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಉಪಮಿಸಬಾರದ ಉಪಮಿಸಲಾಗದ
ನಿರ್ಮಲಾಗಸವೇ ಎನಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಸಲಹಿದಿರಿ ಸಾಕಿದಿರಿ ನಿಮ್ಮೊಕ್ಕುದನಿಕ್ಕಿ"
ನುಡಿಸಿದಿರಿ ನಡೆಸಿದಿರಿ ಕೈ ಹಿಡಿದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಮ್ಮು ಬಿಮ್ಮಿಲ್ಲದ ಸೊಮ್ಮ ಸೊಕ್ಕಿಲ್ಲದ
ಬ್ರಹ್ಮ ಭಾವದ ದಿವ್ಯ ದೀವಿಗೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದ ಬದಲಾಗಿ ಜಂಗಮದ ನುಡಿಯಾಗಿ
ಕಂಗಳ ತುಂಬಿರುವ ವಿಮಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಈಶ ನಿರಾಳವೆ ಇಳೆಯ ಮಂಗಳ ಬೆಳಸೆ
ಶೇಷ ಪ್ರಸಾದವ ಕರುಣಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಗೆ ಬೆರಳೆಂದೆ ಮುಕ್ತಿಗೆ ಮನವೆಂದೆ
ದುಡಿದು ತಿಂಬರಿಗೆ ಜನವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನೆಯ ನೋಡಲಿಬೇಡ ಮನವ ಕಾಂಬುದ ಕಲಿ
ಮನವೆ 'ಮಹಾಮನೆ' ತಿಳಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಫಲಪದವಿ ನೀನೊಲ್ಲೆ ಪರಮ ದಾಸೋಹಿಯೆ
ಪರಮನನರಿವುದ ತೋರಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅವತಾರ ಹೊರಗಿಟ್ಟು ಅವಸರ ಕಳೆದಿಟ್ಟು
ಇಹಪರವ ಬೆಸದಿರುವ ಶಿವಧರ್ಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆದರೆ ಶಿವಮೇರು ನುಡಿದರೆ ಶಿವವೇದ
ಚರಿತ ಸಾಗರ ಸಪ್ತ ಜಲಸಾಂದ್ರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥"

– ಹೆಚ್.ವಿ. ವೀರಭದ್ರಯ್ಯ





**ಪರಮಪೂಜ್ಯ ಶ್ರೀ ಶ್ರೀ ಅಟವೀಸ್ವಾಮಿಗಳವರ 104ನೇ ಮತ್ತು**
**ಪರಮಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ 64ನೇ ಪುಣ್ಯಾರಾಧನಾ ಸಮಾರಂಭ**

### ಮೊದಲನೆಯ ಅಧಿವೇಶನ

ದಿನಾಂಕ : 14-1-2005 ಬೆಳಿಗ್ಗೆ : 10 ಗಂಟೆಗೆ

*ಸಾನ್ನಿಧ್ಯ* : ಶ್ರೀ ಮ.ನಿ.ಪ್ರ. ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು,
*ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ.*

*ಉದ್ಘಾಟನೆ* : ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು
*ಮುರುಘರಾಜೇಂದ್ರ ಮಹಾಸಂಸ್ಥಾನಮಠ, ಆನಂದಪುರಂ, ಶ್ರೀ ಬೆಕ್ಕಿನ ಕಲ್ಮಠ, ಶಿವಮೊಗ್ಗ.*

*'ಸಿದ್ಧಗಂಗಾ' ಸಂಕ್ರಮಣ ಸಂಚಿಕೆ ಬಿಡುಗಡೆ* : ಶ್ರೀ ಮ.ನಿ.ಪ್ರ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು,
*ಉತ್ತರಾಧಿಕಾರಿಗಳು ಮತ್ತು ಕಿರಿಯ ಶ್ರೀಗಳು, ಶ್ರೀ ಸಿದ್ಧಗಂಗಾ ಮಠ.*

*ಉಪನ್ಯಾಸ* : ಡಾ. ಟಿ.ಆರ್. ಚಂದ್ರಶೇಖರ್
*ನಿರ್ದೇಶಕರು, ಪಠ್ಯಪುಸ್ತಕ ವಿಭಾಗ, ವಿದ್ಯಾರಣ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಳ್ಳಾರಿ ಜಿಲ್ಲೆ.*
**ಡಾ. ಸಂಪಿಗೆ ತೋಂಟದಾರ್ಯ**
*ನಿವೃತ್ತ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ.*

### ಎರಡನೆಯ ಅಧಿವೇಶನ

**ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ**

ದಿನಾಂಕ : 14-1-2005 ಮಧ್ಯಾಹ್ನ : 3-00ಕ್ಕೆ

*ದಿವ್ಯ ಅಧ್ಯಕ್ಷತೆ* : ಶ್ರೀ ಮ.ನಿ.ಪ್ರ. ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು
*ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.*

*ಉದ್ಘಾಟನೆ* : ಶ್ರೀ ಮ.ನಿ.ಪ್ರ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು
ಉತ್ತರಾಧಿಕಾರಿಗಳು ಮತ್ತು ಕಿರಿಯ ಶ್ರೀಗಳು, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

*ಉಪನ್ಯಾಸ* : ಡಾ. ರಂಗರಾಜು ವನದುರ್ಗ
*ಪ್ರಾಧ್ಯಾಪಕರು, ಕನ್ನಡ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.*
ಕುಮಾರಿ ಬಾ.ಹ. ರಮಾಕುಮಾರಿ, *ಸಾಹಿತಿಗಳು, ತುಮಕೂರು.*

ತಾವು ದಯಮಾಡಿ ಸಮಾರಂಭದಲ್ಲಿ ಭಾಗವಹಿಸಿ ಕಾರ್ಯಕ್ರಮದ ಯಶಸ್ಸಿಗೆ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

– ಭಕ್ತ ಮಂಡಳಿ



# ಸತ್ಯ ಮತ್ತು ಧರ್ಮ

– ಕೆ. ಪದ್ಮನಾಭ ಉಡುಪ
ನ್ಯಾಯವಾದಿ,
ಶಿವಮೊಗ್ಗ.

'ಸತ್ಯಂ ವದ', ಧರ್ಮಂ ಚರ' – ತೈತ್ತಿರಿಯೋಪನಿಷತ್‌ನ ಹೇಳಿಕೆ. ಸತ್ಯವನ್ನು ಹೇಳು. ಧರ್ಮವನ್ನು ಆಚರಿಸು. ಸತ್ಯ ಮೇಲೋ, ಧರ್ಮ ಮೇಲೋ? ಸತ್ಯಕ್ಕೂ ಧರ್ಮಕ್ಕೂ ಇರುವ ಸಂಬಂಧವೇನು? ಮತ್ತೊಂದು ಪ್ರಶ್ನೆ ಉದ್ಭವಿಸುತ್ತದೆ. ಸತ್ಯವೆಂದರೇನು? ಧರ್ಮವೆಂದರೇನು. ಬಸವಣ್ಣನವರು ಧರ್ಮಸೂಕ್ಷ್ಮವನ್ನು ಒಂದು ಮಾತಿನಲ್ಲಿ ಹೇಳಿದರು. 'ದಯೆ ಇಲ್ಲದ ಧರ್ಮ ಯಾವುದಯ್ಯಾ?; ದಯೆಯೇ ಧರ್ಮದ ಮೂಲ. ಉಪನಿಷತ್ ಮತ್ತೆ ಹೇಳುತ್ತದೆ 'ಸತ್ಯಾನ್ನಪ್ರಮದಿ ತವ್ಯಂ'; ಅಂದರೆ ಸತ್ಯಮಾರ್ಗವನ್ನು ಎಂದೂ ಬಿಡಬೇಡ.

ಮಹಾಭಾರತ, ರಾಮಾಯಣ ಮಹಾಗ್ರಂಥಗಳಲ್ಲಿ ಅನೇಕ ಕಡೆ ಕಂಡುಬರುತ್ತದೆ. ಸತ್ಯ ಹೇಳುವುದರಿಂದ ಅಧರ್ಮವಾಗುವುದಾದರೆ ಸತ್ಯ ಹೇಳದಿರುವುದೇ ಧರ್ಮ. ಅನೇಕ ವೇಳೆ ಅಸತ್ಯದಿಂದ ಕೇಡಾಗುವುದು ತಪ್ಪುತ್ತದೆ. ಆಗ ಅಸತ್ಯವೇ ಧರ್ಮ.

ಉದಾಹರಣೆಗೆ, ಜೀವ ಭಯದಿಂದ ಒಬ್ಬ ವ್ಯಕ್ತಿ ಅಡಗಿ ಕುಳಿತಿರುವುದು ನಮಗೆ ಗೊತ್ತಿರುತ್ತದೆ. ಪ್ರಾಣತೆಗೆಯಲೆಂದೋ, ಮಾನಭಂಗ ಮಾಡಲೆಂದೋ, ಕಿಡಿಗೇಡಿಗಳು ನಮ್ಮನ್ನು ಕೇಳುತ್ತಾರೆ. ಇಂತಹ ವ್ಯಕ್ತಿ ಎಲ್ಲಿರುವರೆಂದು ಗೊತ್ತಿದೆಯೋ? ಆಗ ಗೊತ್ತಿಲ್ಲವೆಂದೋ, ಅಥವಾ ಆ ವ್ಯಕ್ತಿಯನ್ನು ರಕ್ಷಿಸಲು ವಿರುದ್ಧ ದಿಕ್ಕಿನತ್ತ ಕೈ ತೋರಿಸುವುದೇ ಧರ್ಮ. ಇಲ್ಲಿ ಅಸತ್ಯವೇ ಧರ್ಮ. ಹಾಗೆಂದರೆ, ಧರ್ಮ ಸತ್ಯಕ್ಕಿಂತ ಮೇಲೆಂದಾಯಿತು. ಅಥವಾ ಧರ್ಮವೇ ಸತ್ಯವೆಂದಾಯಿತು. ಅಥವಾ ಧರ್ಮದಲ್ಲಿ ಸತ್ಯ ವಡಗಿದೆಯೇ? ಅಥವಾ ಅವೆರಡೂ ಒಂದೆಯೇ?

ಅದಕ್ಕಾಗಿಯೇ ಹೇಳಿದರು, 'ಸತ್ಯಂ ಭ್ರೂಯಾತ್, ಪ್ರಿಯಂ ಭ್ರೂಯಾತ್, ನಭ್ರೂಯಾತ್ ಸತ್ಯಮಪ್ರಿಯಂ' – ಸತ್ಯವನ್ನೇ ಹೇಳು; ನಿಜವನ್ನೇ ಹೇಳು, ಅಪ್ರಿಯವಾದ ಸತ್ಯವನ್ನು ಹೇಳಬೇಡ. ಅದೇ ಧರ್ಮ.

ಬಸವಣ್ಣನವರ 'ಕಳಬೇಡ, ಕೊಲಬೇಡ....' ಎಂಬ ವಚನ ಸತ್ಯ ಧರ್ಮಗಳಿಗೆ ಶ್ರೇಷ್ಠ ಉದಾಹರಣೆ.

ಧರ್ಮದ ಹತ್ತು ಲಕ್ಷಣಗಳು ಮನುಸ್ಮೃತಿಯಲ್ಲಿ ಹಾಗಿದೆ.

*'ಧೃತಿ ಕ್ಷಮಾ ದಮೋಽಸ್ತೇ ಯಂ*
*ಶೌಚಮಿಂದ್ರಿಯ ನಿಗ್ರಹಃ ।*
*ಧೀ ರ್ವಿದ್ಯಾ ಸತ್ಯ ಮಕ್ರೋಧೋ*
*ದಶಕಂ ಧರ್ಮ ಲಕ್ಷಣಂ ॥*

ಧೃತಿ – ಎಂದರೆ ಧೈರ್ಯ – ಜ್ಞಾನಿಗೆ, ಆತ್ಮಶುದ್ಧಿ ಇರುವವನಿಗೆ ಸಹಜವಾದ ಧೈರ್ಯವಿರುತ್ತದೆ. ಇಂತಹ ಧೈರ್ಯವಂತರು ಯಾರಿಗೂ ಹೆದರುವುದಿಲ್ಲ. ಅಲ್ಲದೇ ಅಂತಹ ವ್ಯಕ್ತಿಗಳನ್ನು ಕಂಡರೆ ಇತರರಿಗೆ ಪೂಜ್ಯ ಭಾವನೆ ಬರುತ್ತದೆಯೇ ಹೊರತು ಭಯವಾಗುವುದಿಲ್ಲ. ದುಷ್ಟರಿಗೂ, ಕ್ರೂರಿಗಳಿಗೂ ಧೈರ್ಯವಿರುತ್ತದೆ. ಅದು ಯಮ ಧೈರ್ಯ. ಆದರೆ ಅಂಥವರನ್ನು ಕಂಡಾಗ ಇತರರಿಗೆ ಭಯವಾಗುತ್ತದೆ.

ಕ್ಷಮೆ – ಇದು ಶ್ರೇಷ್ಠ ತಮ ಮಾನವಗುಣ. ಅತಿ ಶ್ರೇಷ್ಠ, ಕ್ಷಮಾದಾನ.

ದಮ – ಎಂದರೆ ಮನೋನಿಗ್ರಹ. ಮನಸ್ಸನ್ನು (ಆತ್ಮದ) ಹತೋಟಿಯಲ್ಲಿಟ್ಟುಕೊಳ್ಳುವುದು.

ಅಸ್ತೇಯ – ಕಳ್ಳತನ ಮಾಡದಿರುವುದು. ಯಾವ ರೀತಿಯಲ್ಲೂ, ಇತರರ ಆಸ್ತಿ, ವಸ್ತುಗಳನ್ನು ಅಪಹರಣ ಮಾಡಬಾರದು.

ಶೌಚ – ಅಂತರಂಗಶುದ್ಧಿ ಬಹಿರಂಗ ಶುದ್ಧಿ.

ಇಂದ್ರಿಯ ನಿಗ್ರಹ – ಕಣ್ಣು, ಕಿವಿ, ನಾಲಗೆ, ಮೂಗು ಮತ್ತು ಚರ್ಮ ಇವುಗಳ ಚಪಲಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು.

ಬುದ್ಧಿ – ಸುಸ್ಥಿರವಾದ, ದೃಢವಾದ ಬುದ್ಧಿ ಇರುವುದು.

ವಿದ್ಯೆ – ಸ್ವದೇಶದಲ್ಲಿ ರಾಜ್ಯ ಪೂಜ್ಯನಾದರೆ ವಿದ್ವಾನ್ ಸರ್ವತ್ರ ಪೂಜ್ಯತೆ. ವಿದ್ಯಾವಂತನಿಗೆ ವಿಶ್ವದಲ್ಲೇ ಗೌರವ ಸಿಗುತ್ತದೆ.

ಸತ್ಯ – ಸತ್ಯವನ್ನು ನುಡಿಯುವುದು. ಮತ್ತು

ಅಕ್ರೋಧ – ಕೋಪವಿಲ್ಲದಿರುವುದು.

ಈ ಹತ್ತು ಲಕ್ಷಣಗಳುಳ್ಳ ವ್ಯಕ್ತಿ ಧರ್ಮಾತ್ಮ. ಆತನೊಬ್ಬ ಮಹಾಪುರುಷ.

ಆದುದರಿಂದ ಸತ್ಯ ಧರ್ಮಗಳನ್ನರಿತು, ಪರಿಶುದ್ಧವಾದ ಅಂತರಾತ್ಮ ನಿಷ್ಕಲ್ಮಷ ಮನಸ್ಸಿನಿಂದ ಬಾಳನ್ನು ಬೆಳಗುತ್ತಿರುವವನಿಗೆ, ಚಿಂತೆ ದೂರ ಸರಿದು, ಸದಾ ಹಸನ್ಮುಖನಾಗಿದ್ದು ರೋಗ ರುಜಿನಗಳೂ ದೂರಾಗಿ, ಈ ಬದುಕು ಆನಂದಮಯವಾಗಿರುತ್ತದೆ. ಅವನೊಬ್ಬ ರಸಋಷಿ. ಸಂಸಾರಿಯಾಗಿದ್ದರೂ ಸನ್ಯಾಸಿ; ಆತ ಸದಾ ಸುಖಿ.

★







# ಶರಣರ ದೃಷ್ಟಿಯಲ್ಲಿ 'ಗುರು' : ಒಂದು ವಿವೇಚನೆ

(ಕಳೆದ ಸಂಚಿಕೆಯಿಂದ)

– ಎಚ್.ಎಸ್. ಸಿದ್ಧಗಂಗಪ್ಪ
'ಶಿವಕೃಪ', ನಂ. ೫೩/೧, ಮೂರನೇ ಅಡ್ಡರಸ್ತೆ,
ಕಾವೇರಿ ಬಡಾವಣೆ, ನಾಗರಭಾವಿ ರಸ್ತೆ,
ವಿಜಯನಗರ, ಬೆಂಗಳೂರು–೪೦.

ಸಕಲ ಸದ್ಗುಣ ಸಂಪನ್ನನಾದ ಈ ಆಚಾರ್ಯ ನಮ್ಮ ಜೀವನದಲ್ಲಿ ಪ್ರವೇಶಿಸಿದರೆ ಜ್ಞಾನಜ್ಯೋತಿ ತಾನಾಗಿಯೇ ಹತ್ತಿಕೊಳ್ಳುತ್ತದೆ. ಅಂತರಂಗ ನಿರ್ಮಲವಾಗುತ್ತದೆ. ನಡೆಯುವ ದಾರಿ, ತಲುಪುವ ಗುರಿ ಸ್ಪಷ್ಟವಾಗಿ ಗೋಚರವಾಗುತ್ತದೆ. ನಾವು ಪುರಾಣ-ಇತಿಹಾಸಗಳ ಪುಟಗಳ ಮೇಲೆ ಕಣ್ಣು ಹಾಯಿಸಿದಾಗ ಅನೇಕ ಮಹಾಪುರುಷರ, ರಾಜರ ಚಿತ್ರಣ ನಮ್ಮ ಮುಂದೆ ನಿಲ್ಲುತ್ತದೆ. ಆವರಲ್ಲಿನ ಸಾಧನೆಯ ಹಿಂದೆ ಗುರುವಿನ ಮಾರ್ಗದರ್ಶನವಿರುವುದು ತಿಳಿದು ಬರುತ್ತದೆ.

ಅಲೆಗ್ಯಾಂಡರ್ ಒಬ್ಬ ವೀರ. ಸಣ್ಣ ವಯಸ್ಸಿನಲ್ಲಿದ್ದಾಗಲೇ ಆಗಿನ ಕಾಲದ ಸಮಸ್ತ ಜಗತ್ತನ್ನೆಲ್ಲ ಗೆಲ್ಲುವ ಆಕಾಂಕ್ಷೆ ಹೊಂದಿದ್ದ. ವಯಸ್ಸಿಗೆ ಬಂದ ಮೇಲೆ ಅವನ ಬಯಕೆಯನ್ನು ಈಡೇರಿಸಿಕೊಂಡ. ಅವನ ಹತ್ತಿರ ಒಬ್ಬ ದೊಡ್ಡ ಮನುಷ್ಯ ಬಂದು 'ಅಲೆಗ್ಯಾಂಡರ್ ಪ್ರಭುಗಳೇ ಏಕೆ ನಿಮ್ಮ ಗುರುಗಳಾದ ಅರಿಸ್ಟಾಟಲರಿಗೆ ಅಷ್ಟೊಂದು ಗೌರವ ಕೊಡುತ್ತೀರಲ್ಲ! ನಿಮ್ಮ ತಂದೆ ಮಹಾರಾಜರು, ಅವರು ನಿಮಗೆ ಸಾಮ್ರಾಜ್ಯವನ್ನೇ ಕೊಟ್ಟರು. ಆದರೂ ಅವರಿಗಿಂತ ಹೆಚ್ಚು ಗೌರವವನ್ನು ನಿಮ್ಮ ಗುರುವಿಗೆ ಕೊಡುತ್ತೀರಲ್ಲ' ಎಂದು ಕೇಳಿದ. ಅದಕ್ಕೆ ಅಲೆಗ್ಯಾಂಡರ್ ಕೊಟ್ಟ ಉತ್ತರ ತುಂಬಾ ಮಹತ್ವವಾದುದು.

''ತಂದೆಗಿಂತಲೂ ಹೆಚ್ಚು ಗೌರವಿಸಲು ಎರಡು ಕಾರಣಗಳಿವೆ. ತಂದೆಯಿಂದ ನಾನು ದೇಹವನ್ನು ಪಡೆದೆ. ಆದರೆ ಇದು ನಾಶವಾಗುವಂತಹ ದೇಹ. ಅರಿಸ್ಟಾಟಲ್ ಗುರುವಿನಿಂದ ನಾನು ಅಮರ ಜೀವನವನ್ನು ಪಡೆದೆ, ನನ್ನ ತಂದೆ ಆಕಾಶದಿಂದ ಭೂಮಂಡಲಕ್ಕೆ ನನ್ನ ತಂದಿಟ್ಟ, ನನ್ನ ಗುರು ನನ್ನನ್ನು ಭೂಮಿಯಿಂದ ಆಕಾಶದ ಎತ್ತರಕ್ಕೆ ಏರಿಸಿಬಿಟ್ಟ. ಯಾರಿಗೆ ಹೆಚ್ಚು ಪೂಜ್ಯ ಸ್ಥಾನವೀಯಬೇಕು ನೀನೇ ಹೇಳು'' ಎಂದು ಮರು ಪ್ರಶ್ನೆ ಹಾಕುತ್ತಾನೆ.[೧]

ಭೂಮಿಯಿಂದ ಆಕಾಶದೆತ್ತರಕ್ಕೇರಿಸುವವರು ಆಚಾರ್ಯರು. ಬದುಕಿನಲ್ಲಿ ಅಮೃತ ಭಾವ ತುಂಬುವವರು ಆಚಾರ್ಯರು. ಆದ್ದರಿಂದಲೇ 'ವರಾನ್ ಪ್ರಾಪ್ಯ ನಿಬೋಧಿತ', 'ಆಚಾರ್ಯವಾನ್ ಪುರುಷೋ ಭವ' ಎಂಬ ನುಡಿರತ್ನಗಳು ಗುರುವಿನ ಎತ್ತರ-ಬಿತ್ತರಗಳನ್ನು ತಿಳಿಸುತ್ತವೆ.

ಗುರು-ಶಿಷ್ಯರ ಸಂಬಂಧ ಹೇಗಿರಬೇಕು ಎಂಬುದಕ್ಕೆ ಒಂದು ಜ್ವಲಂತ ಉದಾಹರಣೆಯೆಂದರೆ ಗೋವಿಂದ ಭಟ್ಟರು ಮತ್ತು ಶಿಶುನಾಳ ಶರೀಫರು. ಗುರು ಬ್ರಾಹ್ಮಣ, ಶಿಷ್ಯ ಮುಸ್ಲಿಮ, ಗುರು ಶಿಷ್ಯರ ಸಂಬಂಧ ಜಾತಿಮತವನ್ನು ಮೀರಿ ನಿಂತಿದೆ. ಇವರದು ಹಾಲು ಸಕ್ಕರೆಯಂತ ಸಂಬಂಧ.

''ಒಮ್ಮೆ ಊರಿನ ಅರಳೀಕಟ್ಟೆಯ ಮೇಲೆ ಗೋವಿಂದಭಟ್ಟರು ಕುಳಿತಿದ್ದಾರೆ. ಕೆಲವರು ಮೇಲು ಜಾತಿಯ ಜನರೂ ಅಲ್ಲೇ ಇದ್ದಾರೆ. ಆ ಹೊತ್ತಿಗೆ ಶರೀಫ ಅಲ್ಲಿಗೆ ಬಂದ. ಭಟ್ಟರು 'ಬಾರೋ ಶರೀಫ' ಅಂತ ಕರೆದು ಅವನನ್ನು ಮೈಗೆ ತಗುಲಿಸಿಕೊಂಡೇ ಕೂತರು. ಅದನ್ನು ನೋಡಿ ಅಲ್ಲಿ ಕುಳಿತಿದ್ದವರ ಮೈಯೆಲ್ಲ ಉರಿದು ಹೋಯಿತು. ತಮ್ಮನ್ನು ಚುಚ್ಚಬೇಕು ಅಂತಲೇ ಭಟ್ಟ ಇದನ್ನೆಲ್ಲಾ ಮಾಡುತ್ತಿದ್ದಾನೆ ಅಂತ ಅನುಮಾನ ಹುಟ್ಟಿತು. 'ಏನು ಭಟ್ಟರೆ ಈ ಸಾಬರ ಹುಡುಗ ನಿಮಗೆ ಬ್ರಾಹ್ಮಣ ವಟುವಿನ ಹಾಗೆ ಕಾಣಿಸುತ್ತಾನೋ? ಮಡಿ ಮೈಲಿಗೆ, ಮೇಲು ಕೀಳು ಯಾವುದರ ಎಚ್ಚರವೂ ನಿಮಗೆ ಇಲ್ಲ ಅಂತ ಕಾಣುತ್ತೆ' ಎಂದು ಅವನನ್ನು ನಿಂದಿಸಿದರು. ಭಟ್ಟರು ಸಿಟ್ಟುಗೊಳ್ಳಲಿಲ್ಲ. ನಕ್ಕು ಬಿಟ್ಟರು. 'ಎಲಾ ಏನು ಬೆರಕೆ ಇದೀರಪ್ಪಾ ನೀವು' ನೀವು ಹುಟ್ಟಿದಷ್ಟಕ್ಕೆ ಬ್ರಾಹ್ಮಣರಾಗಿ ಬಿಟ್ಟೀರೋ? ಈ ಗಟ್ಟಿ ಹುಡುಗನನ್ನು ನಿಂದಿಸುತ್ತೀರಲ್ಲಾ? ಇವನಿಗಿಂತ ದೊಡ್ಡ ಬ್ರಾಹ್ಮಣ ಇಲ್ಲಿ ಆದು ಯಾವೋನು ಇದ್ದಾನೆ ಹೇಳ್ರಪ್ಪಾ' ಎಂದವರೇ ತಮ್ಮ ಮೈಮೇಲಿದ್ದ ಮೂರು ಎಳೆ ಜನಿವಾರ ತೆಗೆದು ಶರೀಫರ ಕೊರಳಿಗೆ ಹಾಕಿ ಅವನನ್ನು ಅಪ್ಪಿಕೊಂಡು ಬಿಟ್ಟರು. ಹಂಗಿಸಿದ್ದವರ ಮುಖ ಕಪ್ಪಿಟ್ಟು ಹೋಯಿತು. ಶರೀಫನೋ ಭಾವಪರವಶನಾಗಿ ಗುರುವಿಗೆ ಉದ್ದಂಡ ನಮಸ್ಕಾರ ಹಾಕಿಬಿಟ್ಟ.

೧. ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಭಗವಚ್ಚಿಂತನೆ, ಪುಟ ೧೬೪.

*ಹಾಕಿದ ಜನಿವಾರವ ಸದ್ಗುರುನಾಥ*
*ಹಾಕಿದ ಜನಿವಾರವ*
*ಹಾಕಿದ ಜನಿವಾರ ನೂಕಿದ ಭವಭಾರ*
*ಲೋಕದಿ ಬ್ರಹ್ಮಜ್ಞಾನ ನೀ ಪಡೆಯೆಂದು*

*ಸಂಧ್ಯಾವಂದನೆ ಕಲಿಸಿ ಆನಂದದ*
*ಬಿಂದು ಮಧ್ಯದಿ ನಿಲಿಸಿ*
*ನಂದಿಸಿ ಮನಸನು ಆತ್ಮದ ಜಲದಲಿ*
*ಎಂದೆಂದಿಗೂ ಯಮದಂಡುಗವಳೆಯೆಂದು*

*ಶಿಶುನಾಳಧೀಶ ಗುರು ತನ್ನೊಡಲೊಳು*
*ವಶವಿದ್ದ ಸೂತ್ರವನು*
*ನಸುನಗುತಲಿ ತೆಗೆದಲ್ಲಿಯೆ ತೊಡಿಸಿದ*
*ಉಸುರಿದ ಮಂತ್ರವ ಹೊಸಬನ ಮಾಡುತ*
*ಹಾಕಿದ ಜನಿವಾರವ ಸದ್ಗುರುನಾಥ*
*ಹಾಕಿದ ಜನಿವಾರವ.*

ತಮ್ಮ ಗುರುವಿನ ಬಗ್ಗೆ ಶಿಶುನಾಳ ಶರೀಫರಿಗೆ ಶುದ್ಧಂತಃಕರಣದಿಂದ ಕೂಡಿದ ಗೌರವ ಭಕ್ತಿ ಸಂಧ್ಯಾವಂದನೆ ಕಲಿಸಿ ಆನಂದದ ಬಿಂದುವಿನ ಮಧ್ಯೆ ನಿಲ್ಲಿಸಿ ಆತ್ಮಜಲದಲ್ಲಿ ಮನಸ್ಸನ್ನು ನಂದಿಸಿ ಎಂದೆಂದಿಗೂ ಯಮನ ಹಿಡಿತದಿಂದ ತನ್ನನ್ನು ಪಾರುಮಾಡಿದ ತಮ್ಮ ಗುರುವಿನ ಬಗ್ಗೆ ಶರೀಫರಿಗೆ ಅಪಾರ ಅಭಿಮಾನ. ಅವರು ತಮಗೆ ಬೇಕಾದ ಗುರು ದೊರಕಿದ್ದನ್ನು ಹೇಳುತ್ತ :

*ಕರಪಾತ್ರೆ ಪಿಡಿದು ಈ*
*ನರ ಶರೀರದಿ ತನ್ನ*
*ಅರಿವ ತನಗೆ ತೋರಿ*
*ಪರಮ ನಂಬುಗೆಯಲ್ಲಿ*
*ದೊರಕಿದಾ ಗುರು ದೊರಕಿದ.*

ಎಂದು ಮನದುಂಬಿ ಹಾಡಿದರು. 'ಅರಿವಿನೊಳಗೆ ಬಂದವರು, ದ್ವಂದ್ವವಿಲ್ಲದ ಒಂದೇ ವಸ್ತು ಎನಿಸಿದವರು. ತನಗೆ ಅರಿವು ನೀಡಲೆಂದೇ ಕರಪಾತ್ರೆ ಪಿಡಿದು ನರಶರೀರದಲ್ಲಿ ಬಂದವರು' ಎಂಬ ಮಾತುಗಳೆಲ್ಲ "ಗುರು ಸಾಕ್ಷಾತ್ ಪರಬ್ರಹ್ಮ" ಎಂಬ ರೂಢಿ ಮಾತಿನ ಅರ್ಥವನ್ನು ಹೊಸರೀತಿಯಲ್ಲಿ ವ್ಯಾಖ್ಯಾನ ಮಾಡಿಕೊಡುವಂತದು. ಅಲೌಕಿಕದ ಸೆಳೆವ ಅಂತರಂಗದ ಚೀರಾಟವಾದಾಗ ಅವನನ್ನು ಗೊತ್ತು ಗುರಿಗೆ ಹಚ್ಚುವ ಗುರು ತಾನೇ ಶಿಷ್ಯನನ್ನು ಹುಡುಕಿಕೊಂಡು ಬರುತ್ತಾನೆ ಅನ್ನುವ ನಂಬಿಕೆ ಇದೆ. ಶರೀಫರಿಗೆ ಗುರು ಸಿಕ್ಕದ್ದು ಹಾಗೆಯೆ'. ಪ್ರಾಚೀನ ಕಾಲದ ಗುರುಶಿಷ್ಯರ ಗಾಢಸಂಬಂಧದ ಕಲ್ಪನೆ ಗೋವಿಂದಭಟ್ಟ ಶರೀಫರಲ್ಲಿ ತನ್ನನ್ನು ಇನ್ನೊಮ್ಮೆ ಸಾಕ್ಷಾತ್ಕಾರಿಸಿ ಕೊಂಡಿತು ಎನ್ನಬಹುದು.[೫]

ಬಸವಣ್ಣ ಚನ್ನಬಸವಣ್ಣ ಲೌಕಿಕವಾಗಿ ಮಾವ ಅಳಿಯಂದಿರು. ಈ ಕೌಟುಂಬಿಕ ಸಂಬಂಧ ಶರಣರ ಸಂಘಟನೆಯಲ್ಲಿ ಎಲ್ಲಿಯೂ ತೊಡಕಾಗಲಿಲ್ಲ. ಅದನ್ನು ಯಾರೊಬ್ಬರೂ ಅಭಿವ್ಯಕ್ತಿಪಡಿಸಲಿಲ್ಲ. ಚನ್ನಬಸವಣ್ಣನಿಗೆ ಬಸವಣ್ಣ ಮಾವ, ಮಂತ್ರಿಯಾಗಿ ಕಾಣಲಿಲ್ಲ. ಅಂತೆಯೇ ಬಸವಣ್ಣನಿಗೆ ಚನ್ನಬಸವಣ್ಣ, ಚಿಕ್ಕವ, ಸೋದರಳಿಯನಾಗಿ ಎಂದೂ ಕಾಣಲಿಲ್ಲ. ಒಂದು ಭಕ್ತಿಯ ಬಿತ್ತರ, ಇನ್ನೊಂದು ಜ್ಞಾನದ ಎತ್ತರ.

ಚನ್ನಬಸವಣ್ಣ ನನಗೆ ಗುರುವಾಗಿ ಅನುಗ್ರಹ ಮಾಡಲು ಕೇಳಿದಾಗ, ತತ್ತ್ವವ ಹಿಡಿದವಂಗೆ ತೊತ್ತಾಗಿ ನಡೆದ ಬಸವಣ್ಣ ಇದಕ್ಕೊಪ್ಪುತ್ತಾನೆಯೆ! 'ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ' ಎಂದು ಹೇಳಿ 'ಶಿಷ್ಯಂಗೆ ಗುರು ಉಪದೇಶ ಮಾಡಬೇಕಲ್ಲದೆ ಗುರುವಿಗೆ ಶಿಷ್ಯನನುಗ್ರಹವ ಮಾಡಿದ ಠಾವುಂಟೆ?' ಎಂದು ಚನ್ನಬಸವಣ್ಣನನ್ನೇ ಪ್ರಶ್ನಿಸುತ್ತಾನೆ. ತನ್ನ ಅರಿವಿಗೆ ಚನ್ನಬಸವಣ್ಣನೇ ಕರ್ತನೆನ್ನುವ ಮಾತು ವ್ಯಕ್ತಿ ಸಂಬಂಧಗಳ ಅನ್ಯಾದರ್ಶದ ದ್ಯೋತಕವಾಗುತ್ತದೆ.

*"ಗುರುವಿಂಗೆ ನೀನೆ ಕರ್ತ, ಲಿಂಗಕ್ಕೆ ನೀನೆ ಕರ್ತ*
*ಜಂಗಮಕ್ಕೆ ನೀನೆ ಕರ್ತ, ಪ್ರಸಾದಕ್ಕೆ ನೀನೆ ಕರ್ತ*
*ಉಪದೇಶಕ್ಕೆ ನೀನೆ ಕರ್ತ, ಕೂಡಲಸಂಗಮದೇವರ ಸಾಕ್ಷಿಯಾಗಿ*
*ಎನಗೆಯು ನೀನೆ ಕರ್ತನಾದ ಕಾರಣ ನಾನು ಬೇಕೆನಲಮ್ಮೆ*
*ಬೇಡೆನಲಮ್ಮೆನು ಕಾಣಾ ಚನ್ನಬಸವಣ್ಣ"*

ಗುರುವೆಂದೆ ಗೌರವಿಸುವ ಅಳಿಯನಿಗೆ ನಾನೇ ಶಿಷ್ಯನೆಂದು ಸಾರುವ ಬಸವಣ್ಣ, ಚನ್ನಬಸವಣ್ಣನಲ್ಲಿಯ ಯಾವ ಕೌಟುಂಬಿಕ ಸಂಬಂಧಗಳನ್ನು ನೆನೆಯುವುದಿರಲಿ ಅಲ್ಲಿ ಸಾಕ್ಷಾತ್ ಕೂಡಲಸಂಗನನ್ನೇ ಕಾಣುತ್ತಾನೆ. ನಾನು ಗುರು, ತಾನು ಗುರು ಎಂದು ಗುರುಡುವ ಲೌಕಿಕ ಪ್ರಜ್ಞೆಗೆ ನಾನು ಶಿಷ್ಯ ತಾನು ಶಿಷ್ಯ ಎಂದು ಕರೆದುಕೊಳ್ಳುವ ಅಲೌಕಿಕ ಪ್ರಜ್ಞೆಯ ಅರ್ಥವಾಗುವುದೇ ಕಷ್ಟ.[೬]

*"ಗುರೋರಭ್ಯರ್ಚನೇನಾಪಿ ಸಾಕ್ಷಾದಭ್ಯರ್ಚಿತಃ ಶಿವಃ ।*
*ನಾಸ್ತಿ ಭೇದಸ್ತಯೋಃ ಕಶ್ಚಿದೇಕತತ್ತ್ವಾತ್ತ್ವ ರೂಪಿತಃ ॥*

[೫]. ವಿಶ್ವಜ್ಯೋತಿ, ಸಂಪುಟ-೧, ಸಂ. ಪ್ರೊ. ಜಿ.ಎಚ್. ಹನ್ನೆರಡುಮಠ, ಪ್ರ. ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ, ಮೂರುಸಾವಿರ ಮಠ, ಹುಬ್ಬಳ್ಳಿ, ಪುಟ. ೨೫೪-೨೫೮.

[೬]. ಜೀವನ ಸಿದ್ಧಾಂತ, ಶ್ರೀ ಜ.ಚ.ನಿ. ಪ್ರ. ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ಸಮಾಜ ರಸ್ತೆ ಬೆಂಗಳೂರು – ೪, ಪುಟ-೫೭೨.





ಗುರುವು ಒಂದು ಮಹಾಪುರುಷಮಣಿ ಇದ್ದಂತೆ. ಅದರಿಂದ ಶಿಷ್ಯಂದಿರನ್ನು ಕತ್ತಲೆಯಿಂದ ಬೆಳಕಿನೆಡೆಗೆ, ಅಜ್ಞಾನದಿಂದ ಸುಜ್ಞಾನದೆಡೆಗೆ ಕರೆದೊಯ್ಯಬಲ್ಲ ಮಾರ್ಗದರ್ಶಕ. ಅಂತಹ ಗುರುವನ್ನು ಎಷ್ಟು ಸಂತೋಷಪಡಿಸಿದರೂ ಸಾಲದು.

*'ಹಿತಮೇವ ಚರೇನ್ನಿತ್ಯಂ ಶರೀರೇಣ ಧನೇನ ಚ*
*ಆಚಾರ್ಯಸ್ಯೋಪಕಾರಾತ್ಸ್ಯ ಶಿವಜ್ಞಾನ ಮಹಾನಿಧೇಃ'*[೭]

ಶಿಷ್ಯನಾದವನು ಶ್ರೀ ಗುರುವಿಗೆ ಎಂದಿಗೂ ಅಹಿತವನ್ನು ಉಂಟುಮಾಡಬಾರದು. ಗುರುವಿಗೆ ಶಿಷ್ಯನು ತನ್ನ ದೇಹವನ್ನು ದಂಡಿಸಿ ದ್ರವ್ಯವನ್ನು ಸಲ್ಲಿಸಿ ನಿತ್ಯ ಹಿತವನ್ನೇ ಮಾಡಬೇಕು.

*'ಗುರುದೇವ ಸದಾಶಿವನು, ಗುರುದೇವ ಮಹಾಮಹಿಮನು;*
*ಗುರುದೇವ ಅಕಲ್ಪಿತ ನಿತ್ಯ ನಿರವಯನು,*
*ಸಾಕಾರವಿಡಿದು ಗುರುಲಿಂಗವಾದ, ನಿರಾಕಾರವಿಡಿದು*
*ಪ್ರಾಣಲಿಂಗವಾದ. ಉಭಯಸ್ಥಲವೇಕವಾದಲ್ಲಿ*
*ಭವವಿರಹಿತ ಭಕ್ತ ಜೀವನ್ಮುಕ್ತನಾದ. ಅಂತ ಗುರು*
*ನಿಂತಸ್ಥಾನ ಕಾಶೀಕ್ಷೇತ್ರ,; ಗುರುಚರಣ ಪ್ರಕ್ಷಾಲೋದಕವೆ*
*ಗಂಗಾತೀರ್ಥ, ಗುರುಲಿಂಗ ಸಾಕ್ಷಾತ್ ಪರಶಿವನಿಂದ*
*ವಿಶೇಷ, ಗುರುದರ್ಶನ ಪರಮಬೋಧೆ, ಗುರುವಾದ*
*ರುದ್ರ ಗಾಯತ್ರಿ, ಗುರುವಿನಿಂದ ಅತಿಶಯ ಘನವೇನೂ ಇಲ್ಲ.*
*ಕೂಡಲ ಚನ್ನಸಂಗಯ್ಯ ಎನ್ನ ಪರಮಗುರು ಶ್ರೀಪಾದಕ್ಕೆ*
*ನಮೋ ನಮೋ ಎಂಬೆನು'*

ಕಲ್ಪನೆಗೆ ನಿಲುಕದ ಕಣ್ಣಿಗೆ ಕಾಣದ ಆ ನಿತ್ಯ ನಿರವಯ ಪರವಸ್ತುವೆ ತನ್ನ ಲೀಲಾವಿಲಾಸದಿಂದ ಸಾಕಾರವಾಗಿ ಪ್ರತ್ಯಕ್ಷ ಗುರುವೆನಿಸಿದ; ಕರದಿಷ್ಟವೆನಿಸಿದ. ನಿರಾಕಾರನಾಗಿ ಪ್ರಾಣಲಿಂಗವೆನಿಸಿದ; ಪ್ರಣವದ ಚೈತನ್ಯವೆನಿಸಿದ. ಗುರುಲಿಂಗವೆರಡರಲ್ಲಿ ಭಿನ್ನವಿಲ್ಲ, ಲಿಂಗಾಂಗ ಸ್ವರೂಪವಾಗಿ ಪುಷ್ಪಪರಿಮಳದಂತಿರುವವರು ಸರ್ವರ ಭಕ್ತಿ ಸಿದ್ಧಿಗಾಗಿ ಬಂದ ಗುರುಮಹಿಮೆಗಿಲ್ಲ ಶಬ್ದಸೀಮೆ. ಶ್ರೀ ಸಿದ್ಧಲಿಂಗೇಶ್ವರರು ತಮ್ಮ ವಚನವೊಂದರಲ್ಲಿ ಗುರುವಿನ ಮಹತ್ವವನ್ನು ಗುರುವಿನುಪದೇಶದಿಂದ ದೊರೆಯುವ ಅಪೂರ್ವ ದಿವ್ಯಾನುಗ್ರಹವನ್ನು ಕುರಿತು ಮನದುಂಬಿ ಹೇಳಿದ್ದಾರೆ.

*"ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತ್ತು*
*ಎನ್ನ ಗುರುವಿನುಪದೇಶ. ಕನ್ನಡಿಯ ರವಿಯ ತನ್ನೊಳಗೆ*
*ಇರಿಸಿಕೊಂಡಂತಾಯಿತೆನ್ನ ಗುರಿವಿನುಪದೇಶ.*
*ಜಲದ ನಿರ್ಮಳ ಗಗನವನೊಳಕೊಂಡ ಪರಿಯಂತಾಯಿತ್ತೆನ್ನ*
*ಗುರುವಿನಪದೇಶ, ಚಂದ್ರಕಾಂತದ ಶಿಲೆಯ ಚಂದ್ರಮನ*
*ಸೋಂಕಿದಾಯಿತೆನ್ನ ಗುರುವಿನಪದೇಶ*
*ಕೊಡನೊಳಗಣ ಬಯಲ ಹಂಚಿಕೊಂಡ ಪರಿಯಂತಾಯಿತ್ತೆನ್ನ*
*ಗುರುವಿನಪದೇಶ*

ಗುರು ಮತ್ತು ಶಿವಲಿಂಗಗಳಲ್ಲಿ ಯಾವುದೇ ಭೇದವಿಲ್ಲ, ವ್ಯತ್ಯಾಸವಿಲ್ಲ, ತತ್ವದಿಂದ ಅವೆರಡು ಒಂದಾಗಿವೆ. ಗುರು ಬೀಜವಾದರೆ ಲಿಂಗ ಅಂಕುರವಾಗುತ್ತದೆ. ಅದರಿಂದಾಗಿ ಗುರುವನ್ನು ಸಮರ್ಚಿಸಿದರೆ ಶಿವಲಿಂಗವನ್ನು ಸಾಕ್ಷಾತ್ತಾಗಿ ಸಮರ್ಚಿಸಿದಂತೆಯೇ ಆಗುತ್ತದೆ.

*"ಯಥಾ ದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ*
*ತಥಾ ಗುರುವರೇ ಕುರ್ಯಾದುಪಚಾರಾನ್ ದಿನೇದಿನೇ ।*
*ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ*
*ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥"*

ಜಗನ್ನಾಥನೂ ಜಗತರಕ್ಷಕನೂ ಆದ ಶಿವನನ್ನು ಆರಾಧಿಸುವಂತೆ ಗುರುವನ್ನು ಪ್ರತಿನಿತ್ಯ ಆರಾಧಿಸಿ ಗೌರವಿಸಬೇಕು. ಈ ಭೂಮಿಯಲ್ಲಿ ಗುರುವಿಗಿಂತ ಮತ್ತೊಂದು ಬೃಹದ್ವಸ್ತುವಿಲ್ಲ. ಭಕ್ತನ ಪಿಂಡಾಂಡಕ್ಕೆಲ್ಲ ಗುರುವೇ ಒಡೆಯನು. ಸಂಸ್ಕಾರವನ್ನು ಕರುಣಿಸಲು ಕರ್ತನಾಗಿರುವುದರಿಂದ ಶಿವಸಂಸ್ಕಾರಾಪೇಕ್ಷಿಗಳಿಗೆಲ್ಲ ಅನುಗ್ರಹ ಕರ್ತನಾಗಿರುತ್ತಾನೆ ಶ್ರೀಗುರು. ಇದರಿಂದಾಗಿ ಗುರುವು ಮಹಾದೇವ ಸ್ವರೂಪನಾಗಿದ್ದಾನೆ. ಮಹಾದೇವನಂತೆ ಪರಮಪೂಜ್ಯನಾಗಿದ್ದಾನೆ.[೮]

*'ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।*
*ಚಕ್ಷುರುನ್ಮೀಲಿತಂ ಯೇನ ತಸ್ಮೈಶ್ರೀಗುರವೇ ನಮಃ॥"*

ಅಜ್ಞಾನವೆಂಬುದು ಅಂಧಕಾರ. ಅದರಲ್ಲಿರುವವನು ಕುರುಡ, ಅವನಿಗೆ ಶಿವಪ್ರಕಾಶ ಕಾಣಿಸುವುದಿಲ್ಲ. ಅದು ಕಾಣಬೇಕಾದರೆ ಅಂತರಂಗದ ಕಣ್ಣು ತೆರೆಯಬೇಕು. ಅದೇ ಸುಜ್ಞಾನನೇತ್ರ. ಅರಿವಿನ ಕಣ್ಣನ್ನು ಕೊಡುವವನು ಗುರು. ಗುರು ಅರಿವಿನ ನೇತ್ರವನ್ನು ತೆರೆಸದಿದ್ದರೆ ಶಿಷ್ಯನ ಬದುಕು ಅಂಧಕಾರದಲ್ಲಿಯೇ ಕೊಳೆಯಬೇಕಾಗುತ್ತದೆ. ಕತ್ತಲೆಯನ್ನು ಸರಿಸಿ ಜ್ಞಾನದ ಜ್ಯೋತಿಯನ್ನು ಬೆಳಗುವವನು ಗುರುವಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ. ಅಂತರಂಗದ ಕಣ್ಣು ತೆರೆಸುವ ಗುರುವನ್ನು ಆಶ್ರಯಿಸಬೇಕು. ಅಲ್ಲಮಪ್ರಭು ತಮ್ಮ ಒಂದು ವಚನದಲ್ಲಿ ಗುರುವಿನ ಮಹತ್ವವನ್ನು ಹೀಗೆ ವರ್ಣಿಸಿದ್ದಾರೆ.

*'ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆ*
*ನೆಂದಡೆ ಸಿಕ್ಕದೆಂಬ ಬಳಲಿಕೆಯ ನೋಡಾ । ಕಂಡುದನೆ*
*ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಾಣಬಹುದು*
*ಕಾಣಾ ಗುಹೇಶ್ವರಾ'*

ಕಣ್ಣಿಗೆ ಕಾಣುವ ಈ ಗುರುವಿನಿಂದಲೇ ಕಾಣದ ವಸ್ತುವನ್ನು ಪಡೆಯಬೇಕು. ಕಣ್ಣಿಗೆ ಕಾಣದ ಈ ಮಹಾಜ್ಯೋತಿಯನ್ನು ತೋರಿಸುವಾತನೇ ಗುರು.

[೭]. ಜೀವನ ಸಿದ್ಧಾಂತ ಡಾ. ಜ.ಚ.ನಿ. ಪುಟ-೫೪೪.

[೮]. ಜೀವನ ಸಿದ್ಧಾಂತ, ಡಾ. ಜಚನಿ, ಪುಟ-೬೨೯.

*ಇದು ಕಾರಣ ಮಹಾಘನ ಸದ್ಗುರು ಸಿದ್ಧಸೋಮನಾಥನೆಂಬ ಲಿಂಗದಂತಾಯಿತ್ತೆನ್ನ ಗುರುವಿನಪದೇಶ'*

*ಭವ ತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು ಕಾಣಬಾರದೆ ಇದ್ದಾಗ ಕಣ್ಣಿಂಗೆ ಜ್ಞಾನವೆಂಬ ಅಂಜನವನೆಚ್ಚು ಶಿವಪಥವಿದೆಂದು ತೋರಿದ ಸದ್ಗುರುದೇವಂಗೆ ನಮೋ ನಮೋ ಎಂಬೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ''.*

**ಗು**ರುವಿನ ಉಪದೇಶ ವಚನ ರವಿಶಶಿಗಳಂತೆ ಪ್ರಭಾವಶಾಲಿಯಾದುದು ಮಾತ್ರವಲ್ಲ; ಅದಕ್ಕಿಂತ ಮಿಗಿಲಾಗಿ ಪ್ರಭಾವಶಾಲಿಯಾದುದು. ಸಚ್ಛಿಷ್ಯನ ಹೃದಯವನ್ನು ಹದಗೊಳಿಸುವ ಸುಜ್ಞಾನ ಸಂಪತ್ತಿನಿಂದ ಸಡಗರಿಸುವ ಶಕ್ತಿ ಅದಕ್ಕಿದೆ. ಗುರುವಾಗಿ ಮಿಂಚಿನ ಗೊಂಚಲು; ಸಾರಸಂಜೀವಿನಿ. ಅಂತೆಯೇ **'ಗುರುವಿನುಪದೇಶಮಂತ್ರ ವೈದ್ಯ'** ಎಂದು ಕೊಂಡಾಡಿದನು ಭಕ್ತಿ ಬಲ್ಲಿದ ಬಸವಣ್ಣ. ಇಂತಹ ಅಮೃತಶಾಲಿಯಾದ ವಾಣಿಯುಳ್ಳ ಅನುಭಾವಿ ಆಚಾರ್ಯನು ಸಿಕ್ಕುವುದು ದುರ್ಲಭ.[೯]

*''ಗುರುವನರಿವನ್ನಕ್ಕ ಅಷ್ಟಾದಶ ವಿದ್ಯೆಯನರಿಯಲುಂಟು; ಓದಲುಂಟು, ಕೇಳಲುಂಟು, ಹೇಳಲುಂಟು, ಗುರುಕರುಣದಿಂದ ಗುರುವನರಿದ ಬಳಿಕ ಗುರುವಲ್ಲದೆ ತಾನಿಲ್ಲ, ತಾನಿಲ್ಲವಾಗಿ ಓದಲಿಲ್ಲ; ಓದಲಿಲ್ಲಾಗಿ ಕೇಳಲಿಲ್ಲ; ಕೇಳಲಿಲ್ಲಾಗಿ ಹೇಳಲಿಲ್ಲ; ಹೇಳಲಿಲ್ಲಾಗಿ ಅರಿಯಲಿಲ್ಲ; ಅರಿಯಲಿಲ್ಲಾಗಿ ಅರಿವನರಿಯದ ಗುರುವನರಿಯಲುಂಟೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ''*

*''ಗುರು ಕಾರುಣ್ಯವೇ ಸದಾಚಾರ. ಗುರುಕಾರುಣ್ಯವೇ ಶಿವಾಚಾರ ಗುರುಕಾರುಣ್ಯವೇ ಪ್ರಸಾದ ರುಚಿ, ಮುಂದೆ ಗುರು, ಹಿಂದೆ ಲಿಂಗ ಕೂಡಲಸಂಗಮದೇವಾ''*

**ಈ** ಮೇಲಿನ ಎರಡು ವಚನಗಳು ಗುರುವಿನ ಎತ್ತರ ಬಿತ್ತರಗಳನ್ನು ಪರಿಚಯಮಾಡಿಕೊಡುತ್ತದೆ.

**'ತ**ಡೆ ನೆಲೆ ಇಲ್ಲದ ಮಹಾನದಿಯಲ್ಲಿ ಒಡಲಿಲ್ಲದ ಅಂಬಿಗ ಬಂದಿದ್ದಾನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟರೆ ಗಡಣವಿಲ್ಲದೆ ಹಾಯಿಸುವೆ ಹೊಳೆಯಾನು. ನುಡಿಯಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತನಂಬಿಗರ ಚೌಡಯ್ಯ''.

**ಗು**ರುವಿನ ಕಾರುಣ್ಯ ಪ್ರವಾಹ ಅದೊಂದು ಮಹಾನದಿ. ಅದಕ್ಕಿಲ್ಲ ದೇಹಭಾವವೆಂಬ ನೆಲ. ದ್ವಂದ್ವ ಭಾವವೆಂಬ ದಡ. ಆ ಮಹಾನದಿಯಲ್ಲಿ ತೇಲಿಬರುವ ಅಂಬಿಗ ಗುರುದೇವ ಆತನಿಗೆ ಜಡಭಾವವಿಲ್ಲವಾಗಿ ಅದರಲ್ಲಿ ಮುಳುಗ. ಆ ಕಾರುಣ್ಯಶಾಲಿ ಗುರು ಈ ಸಂಸಾರದಲ್ಲಿದ್ದರೂ ಸಂಸಾರ ಸಂಪರ್ಕ ಅವನಿಗಿಲ್ಲ. ಆತ ಆ ಮಹಾಜ್ಞಾನದ ನೌಕೆಯಲ್ಲಿರುತ್ತಾನೆ. ಆತನೊಡನೆ ಆ ನೌಕೆಯಲ್ಲಿ ಕುಳಿತು ಶಿಷ್ಯನು ಸಂಸಾರ ನದಿಯನ್ನು ದಾಟಬೇಕಾದರೆ ಹಣವನ್ನೀಯಬೇಕು. ಹಾಗೆ ನೀಡುವ ಹಣ ಹೊರಗಿನದಲ್ಲ. ಸಂಕಲ್ಪ ವಿಕಲ್ಪರಹಿತ ಮನವೇ ಆತನಿಗೆ ಸಲ್ಲಿಸುವ ಬೆಲೆ. ಅದನಿತ್ತರೆ ಹೊಳೆ ದಾಟಿಸುವನು. ನುಡಿಗೆ ನಿಲುಕದ ನಿಸ್ಸೀಮ ಶಿವನೆಂಬ ಗ್ರಾಮದಲ್ಲಿರಿಸುವನು. ಶ್ರೀಗುರು ತನ್ನಲ್ಲಿ ಭಕ್ತಕಾಣಿಕೆಯನ್ನಿತ್ತ ಭಕ್ತನ ಸಂಸಾರ ತಿಮಿರವನ್ನು ಕಳೆದು ಮುನ್ನಡೆಯಿಸಿ ಶಿವಜ್ಞಾನ ಸಾಗರವನ್ನು ಸೇರಿಸುವನು, ಭಕ್ತನೆಂಬ ನದಿಯ ನಾಮರೂಪುಗಳು ನಿರ್ನಾಮವಾಗುವವು.

**ಗು**ರು ಪರಂಜ್ಯೋತಿ ಸ್ವರೂಪ. ಸ್ವಯಂಜ್ಯೋತಿ ರೂಪ. ಅವನ ಮುಂದೆ ಸೂರ್ಯನು ನಿಲ್ಲನು. ಈ ಸೂರ್ಯನು ಬರೀ ಬಾಹ್ಯ ತಿಮಿರವನ್ನೂ ಕಳೆಯುತ್ತಾನೆ. ಗುರುಭಾನು ಹೊರವೊಳಗಿನ ತಿಮಿರವನ್ನು ಕಳೆಯುತ್ತಾನೆ.

**'ದೀ**ಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರು ತ್ರಿವಿಧಕಾರಂಗಳನರಿದು ಕರ್ಮಕ್ರಿ ಆಚಾರ ಸಂಬಂಧವ ಸಂಬಂಧಿಸಿ ಮಾಡುವಲ್ಲಿ ದೀಕ್ಷಾಗುರು ಆಕ್ರೀ ತಪ್ಪಿದಲ್ಲಿ ಬಂಧನವ ಮಾಡುವಲ್ಲಿ ಶಿಕ್ಷಾಗುರು. ಇಷ್ಟಕಾಮ್ಯ ಮೋಕ್ಷಂಗಳ ಗೊತ್ತುಗೆಡಿಸಿ ನಿಶ್ಚೈಯಿಸಿ ಮಾಡುವುದು ಮೋಕ್ಷಾಗುರು. ಇಂತೀ ಭೇದದಾಗವನರಿಯಬಲ್ಲಡೆ ಪರಮಗುರು ನಿಃಕಳಂಕ ಮಲ್ಲಿಕಾರ್ಜುನಾ''.

**ಅ**ಷ್ಟಾವರಣಗಳಲ್ಲಿ ಮೊದಲ ಸ್ಥಾನ ಗುರುವಿಗೆ ಸಲ್ಲುವಂತಹದು. ಗುರುವಿನ ಉಪದೇಶಕ್ಕೆ ಪಾತ್ರನಾದ ಪುರುಷನೇ ಪರಮಾತ್ಮನನ್ನು ಅರಿತುಕೊಳ್ಳುವನು. ಅಜ್ಞಾನವನ್ನು ಪರಿಹರಿಸಿ, ಶಿವಜ್ಞಾನವನ್ನುಂಟುಮಾಡಿಕೊಡುವ ಸದ್ಗುರುವನ್ನು ಸಾಧಕನು ಮೊದಲು ಅನುಸರಿಸಬೇಕು. ಗುರುಗಳಲ್ಲಿ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರು ಪ್ರಕಾರಗಳಿರುತ್ತವೆ. ಒಬ್ಬನಿಂದಲೂ ಈ ಮೂರು ಕ್ರಿಯೆಗಳೂ ನಡೆಯಬಹುದು. ಗುರುಶಿಷ್ಯನಿಗೆ ದೀಕ್ಷೆಕೊಡುವುದರಿಂದ ಶಿಷ್ಯನು ತನ್ನ ತನುತ್ರಯಗಳಿಗಂಟಿಕೊಂಡ ಮಲತ್ರಯಗಳನ್ನು ಕಳೆದುಕೊಂಡು ಸರ್ವಾಂಗಲಿಂಗ ಸಿದ್ಧಿ ಪಡೆಯುವನು. ಆ ವಿದ್ಯೆ ಆತ್ಮನನ್ನು ಅನುರೂಪವನ್ನಾಗಿ (ಸಂಕುಚಿತ) ಮಾಡುವುದರಿಂದ ಆ ವಿದ್ಯೆಯೇ ಅಣುವಮಲವೆನಿಸಿದೆ. ಸತ್ಯವಾಗಿರುವುದನ್ನು ಇಲ್ಲವೆಂದೂ, ಪ್ರಕಾಶಿಸುವುದನ್ನು ಅಪ್ರಕಾಶವೆಂದೂ ವ್ಯವಹರಿಸುವ ಕಿಂಚಿಜ್ಞತ್ವವೇ ಮಾಯಾಮಲವೆನಿಸಿದೆ. ಕರ್ಮಫಲ ವಾಸನಾರೂಪವಾದುದೇ ಕಾರ್ಮಿಕ ಮಲವೆನಿಸಿದೆ. ಇವು ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳನ್ನು ಆವರಿಸಿ ಬಂಧನಕ್ಕೊಳಪಡಿಸುವುದರಿಂದ ಆತ್ಮನಿಗೆ ಜೀವಭಾವ ಉಂಟಾಗುವುದು. ಇದರಿಂದ ಆತ್ಮನು ಸಂಸಾರ ದುಃಖಕ್ಕೆ ಗುರಿಯಾಗುವನು. ಈ ಜೀವಭಾವದ ಪರತ್ವವನ್ನು ಕಳೆದುಕೊಳ್ಳಲೆಂದೇ ಮುಮುಕ್ಷುವಿಗೆ ಶಿವದೀಕ್ಷೆ ಅವಶ್ಯವಾಗಿರುತ್ತದೆ.[೧೦]

*(ಮುಂದುವರೆಯುತ್ತದೆ)*

೯. ಅದೇ ಪುಟ ೭೩೫.

೧೦. ವಿಶ್ವಪ್ರಭೆ-೩, ಸಂ. ಜಿ. ಹೆಚ್. ಹನ್ನೆರಡು ಮಠ, ಪ್ರ. ಜಗದ್ಗುರು ಗಂಗಾಧರ ಧರ್ಮ ಪ್ರಚಾರ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ.





# ದುಡಿಮೆ

– ಶ್್ರೀಮತಿ ಶೋಭಾ ಎಸ್. ಕೋಟಿ
ಶ್ರೀಬನಶಂಕರಿ ದೇವಿ ನಿಲಯ
ಧರ್ಮಗೌಡ ಪೇಟೆ, ಇಲಕಲ್ಲ.

**ನಾ**ವು ದೇವರನ್ನು ಪ್ರತಿಯೊಂದರಲ್ಲೂ ಕಾಣಬಹುದು. ಬೆಳೆದು ನಿಂತ ಶರೀರಕ್ಕೆ ದುಡಿಮೆಯೆ ಆಶ್ರಯ. ಜೀವನವೆಂದೂ ಅರ್ಥಹೀನ ಹೋರಾಟವಲ್ಲ. ಜೀವನಕ್ಕೆ ತನ್ನದೇ ಆದ ಶಕ್ತಿಯ ಅರ್ಥವುಂಟು, ಉಚ್ಚಮೌಲ್ಯಗಳ ಕಣಜವೂ ಹೌದು. ಜೀವನಕ್ಕೆ ತನ್ನದೇ ಆದ ಬೆಲೆ ಬರಬೇಕಾದರೆ ಅದು ಮನುಷ್ಯ ಶಕ್ತಿಯಿಂದ ಮಾತ್ರ ಸಾಧ್ಯ. ಈ ಶಕ್ತಿಯಿಂದಲೇ ಪ್ರತಿಯೊಬ್ಬ ಮನುಷ್ಯನು ಮಾಡಲೇಬೇಕಾದ ಸ್ವಕಾರ್ಯ ಪ್ರಕೃತಿಗೆ ಸಲ್ಲಬೇಕಾಗಿದೆ. ಉದ್ದೇಶವಿಲ್ಲದ ಜೀವನ ಜೀವನವೇ ಅಲ್ಲ, ದುಡಿಮೆ ಇಲ್ಲದಿದ್ದರೆ ಏನೂ ಇಲ್ಲ. ಜೀವನ ನಡೆಸಲು ಸತತ ಪರಿಶ್ರಮದ, ದುಡಿಮೆ ಅಥವಾ ಸತತ ಉದ್ಯೋಗದ ಅವಶ್ಯಕತೆ ಇದೆ.

**ನ**ಮ್ಮ ಹಿರಿಯರೆಲ್ಲರೂ 'ದುಡಿದು ಉಣ್ಣು' ಎಂಬ ನೀತಿಯಿಂದಲೇ ಕಾರ್ಯತತ್ಪರರಾದವರು. 'ಕೈ ಕೆಸರಾದರೆ ಬಾಯಿ ಮೊಸರು' ಎಂಬ ಲೋಕೋಕ್ತಿ ದುಡಿಮೆಯ ಮಹತ್ವವನ್ನು ಹೇಳುತ್ತದೆ. ಒಂದು ವೇಳೆ ದುಡಿಮೆ ಅಥವಾ ಸಸತ ಉದ್ಯೋಗ ಇರದಿದ್ದರೆ ಜೀವನವೇ ಅಸಹನೀಯವಾಗುತ್ತಿತ್ತು. ದುಡಿಮೆ ಅಥವಾ ಪರಿಶ್ರಮ ಎಂದ ಮೇಲೆ ಬೌದ್ಧಿಕ ಆಗಿರಬಹುದು ಅಥವಾ ದೈಹಿಕವೂ ಆಗಿರಬಹುದು. ಇವೆರಡರಲ್ಲೂ ಯಾವುದೂ ಹೆಚ್ಚು ಕಡಿಮೆ ಅಲ್ಲ. ಕೆಲಜನರ ಪ್ರಕಾರ ದೈಹಿಕ ಶ್ರಮಕ್ಕಿಂತ ಮಾನಸಿಕ ಶ್ರಮವೇ ಹೆಚ್ಚಿನದೆಂದು ಅಭಿಪ್ರಾಯವಿದೆ. ಆದರೆ ಇದು ತಪ್ಪು ಕಲ್ಪನೆ. ಒಬ್ಬ ಶಿಕ್ಷಕ, ನ್ಯಾಯವಾದಿ ಕರ್ತವ್ಯಕ್ಕಿಂತ, ಬಡಗಿಯಾಗಲಿ, ಮನೆಯಲ್ಲಿನ ಕೆಲಸವಾಗಲಿ ಅಥವಾ ಇತರೆ ಶ್ರಮದಿಂದ ಮಾಡುವ ಕೆಲಸವಾಗಲಿ ಕಡಿಮೆಯದಲ್ಲ. ಎಲ್ಲ ಶ್ರಮಗಳಿಗೂ ಒಂದು ಗೌರವ ಮನ್ನಣೆ ಉಂಟು.

**'ಕಾ**ಯಕ'ವೆಂದರೆ ಯೋಗ, ದುಡಿತವೆಂದರೆ ಭಾರವಲ್ಲ. ಅದು ನಮ್ಮ ಹೃದಯ ಬುದ್ಧಿ ಮನಸ್ಸುಗಳನ್ನು ತನ್ನಲ್ಲಿ ಸಂಪೂರ್ಣ ತೊಡಗಿಸುವಂತ ಕ್ರಿಯೆ. ಹೀಗೆ ತಿಳಿದುಕೊಂಡರೆ ಮಾತ್ರ ನಾವು ದುಡಿತದಲ್ಲಿ ಆನಂದ ಅನುಭವಿಸಬಹುದು. ಅಲ್ಲದೇ ನಮಗೆ ಯಾವುದರಲ್ಲಿ ತೃಪ್ತಿ ಸಿಗುವುದೋ ಆ ಕೆಲಸ ಮಾಡಿದರೆ ಅವೆಲ್ಲವೂ ಪರಿಪೂರ್ಣವಾಗುತ್ತವೆ. ಇಲ್ಲದೇ ಹೋದರೆ ಅವು ನಿರರ್ಥಕ. ಮನುಷ್ಯ ಜೀವಿಸಲು ಪ್ರಾರಂಭಿಸುವುದು ಕೆಲಸ ಪ್ರಾರಂಭಿಸಿದಾಗ ಮಾತ್ರ. ಕೆಲಸ ಮಾಡುವಾಗ ಏಕಾಗ್ರತೆ ಇರಬೇಕು. ಕ್ರಿಯೆಯಲ್ಲಿ ತೊಡಗಿರುವುದು ಒಂದು ಸಂತೋಷದ ಅನುಭವವೇ ಸರಿ. ಪ್ರತಿಯೊಂದು ಕೆಲಸದಲ್ಲೂ ಪ್ರತಿಫಲ ನಿರೀಕ್ಷಿಸಬಾರದು. ಕೆಲಸದಿಂದ ಬೇಸರ ಹೋಗಲಾಡಿಸಬಹುದು. ಇದರಿಂದ ವ್ಯವಹಾರ ಕುಶಲತೆ, ನವೀನತೆ, ಚಣಾಕ್ಷತನ, ಚಟುವಟಿಕೆ ಬೆಳೆಸಿ ಕೊಳ್ಳಲು ಸಾಧ್ಯವಿದೆ.

**ಶ್ರ**ಮದಿಂದ ಬಂಜರು ಭೂಮಿಯನ್ನು ಫಲವತ್ತಾಗಿ ಮಾಡಿದ ನಮ್ಮ ಹಿರಿಯರು ಇದ್ದಾರೆ. ಮಕ್ಕಳಿಗಿಂತಲೂ ಹೆಚ್ಚಾಗಿ ಮರಗಿಡಗಳನ್ನು ಪರಿಶ್ರಮದಿಂದ ಬೆಳೆಸಿ ಸಲುಹಿದ ಶ್ರಮಜೀವಿಗಳು ಇದ್ದಾರೆ. ಕಠಿಣವಾದ ಶಿಲೆಯನ್ನು ಮೇಣದಂತೆ ಮಾಡಿ ಸುಂದರ ಮೂರ್ತಿಯನ್ನು ನಿರ್ಮಿಸಿದ ಶಿಲ್ಪಿಗಳು ಇದ್ದಾರೆ. ಹೀಗೆ ನಾವೆಲ್ಲ ಮಾಡುವ ಕೆಲಸದಿಂದಲೇ ತೃಪ್ತಿ ತಂದುಕೊಳ್ಳಬಹುದು.

**ಮ**ನುಷ್ಯನ ಪರಿಶ್ರಮದ ಮೂಲಕ ಪರಿಪೂರ್ಣತೆಯನ್ನು ಪಡೆಯಬಲ್ಲ ಹೊರತು ದೈವದಿಂದಲ್ಲ. ಮನುಷ್ಯನಿಗೆ ದುಡಿಯಲು ಕೈಗಳು, ಯೋಚಿಸುವ ತಲೆ, ಅವುಗಳಿಗೆ ಸಹಾಯಕವಾಗುವಂತಹ ಇತರ ಅಂಗಾಂಶಗಳು ಎಲ್ಲವೂ ಇವೆ. ಅವುಗಳನ್ನು ಸರಿಯಾದ ಕೆಲಸದಲ್ಲಿ ತೊಡಗಿಸಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ.

**'ನಿ**ನ್ನ ಕೆಲಸವನ್ನು ನೀನು ನೋಡಿಕೊಳ್ಳುವುದು ಯಾವ ಸ್ಪರ್ಧೆಯೂ ಇಲ್ಲದ ಒಂದು ಕೆಲಸ'. ಎನ್ನುವಂತೆ ಜೀವನ ನಡೆಸಲು ಪರಿಶ್ರಮವೆಂಬ ಸಾಧನವೇ ಮುಖ್ಯ. ಈ ಶ್ರಮವೇ ಅಗತ್ಯ. ವಿದ್ಯಾರ್ಥಿ ಜೀವನದಲ್ಲಿ ವಿದ್ಯಾರ್ಥಿ ಇದ್ದರೂ ಕೂಡ ತನ್ನ ಉಟ್ಟ ಬಟ್ಟೆ, ತಂದ ಸಾಮಾನುಗಳನ್ನು ಸ್ವಚ್ಛವಾಗಿಡುವುದರಲ್ಲಿ ತಪ್ಪೇನೂ ಇಲ್ಲ, ಅಲ್ಲದೇ ಅವರಿಗೂ ಶ್ರಮದ ಅನುಭವ ಕೊಡುವುದು ತಪ್ಪಲ್ಲ. 'ಅರಿವೇ ಗುರು'. ಓದಿನೊಂದಿಗೆ ದೈಹಿಕ ಶ್ರಮವೂ ಅಗತ್ಯವಿದೆ. ಈ ಶ್ರಮವು ಅನಿವಾರ್ಯವಿದೆ. ನಾವು ಮಾಡಿದ ಕ್ರಿಯೆಗಳಿಂದ ಶಾಂತಿ, ನೆಮ್ಮದಿ, ತೃಪ್ತಿಯನ್ನು ತಂದುಕೊಡುವ ಅಭಿಮಾನದ ಕುರುಹು ಎಂದರೂ ತಪ್ಪಾಗಲಾರದು.

**ನ**ಮ್ಮ ಬದುಕಿಗೆ ದಾರಿ ಮಾಡಿ ಕೊಟ್ಟು ಹೊಸ ಹೊಸ ಅನುಭವಗಳಲ್ಲಿ ತಂದು ಕೊಡುವ ಶಕ್ತಿಗೆ ದೇವರೆಂದರೆ ತಪ್ಪೇನು? ಚಿಕ್ಕಕಾರ್ಯವೇ ಆಗಿರಲಿ 'ಅದೇನು ಬಿಡು ಮಾಡಿದರಾಯ್ತು' ಎಂದು ಬಿಟ್ಟರೆ ಆಲಸ್ಯವನ್ನು ತಾವೇ ಕರೆಸಿಕೊಂಡಂತೆ. ಹಿರಿಯರಾದವರು ಹೇಗಾದರೂ ಮಾಡಿ ಕಿರಿಯರಿಗೆ ಅವರವರ ಅನುಭವ

ದೊರಕಿಸಿಕೊಟ್ಟರೆ ನಿಜವಾದ ಗುರುಗಳಾಗುವರು. ಎಷ್ಟೋ ನಮ್ಮ ಹಿರಿಯ ಸ್ವಾತಂತ್ರ್ಯಯೋಧರು. ಮಹನೀಯರು, ಮಹಾತ್ಮರೂ ತಮ್ಮ ಕೆಲಸವನ್ನು ತಾವೇ ಮಾಡಿಕೊಂಡವರು. ಇಂತಹವರನ್ನು ನೋಡಿಯಾದರೂ ಸ್ವಾಭಿಮಾನದ ಪಾಠ ಕಲಿಯುವುದು ತಪ್ಪೇನಿಲ್ಲ, ಅಲ್ಲದೇ ಕಾರ್ಯತತ್ಪರನಾದವನಿಗೆ ಕಣ್ಣೀರಿಡಲು ಸಮಯವೇ ಸಿಗಲಾರದು.

ವಿದ್ಯೆಯಿಂದ ವಿಚಾರ, ಬುದ್ದಿಯಿಂದ ವಿವೇಕ, ದುಡಿತದಿಂದ ಜೀವನ ಎನ್ನುವಂತೆ ಮನುಷ್ಯ ವಿದ್ಯೆಯನ್ನು ಹೇಗಾದರೂ ಸಂಪಾದಿಸ ಬಹುದು. ಬುದ್ಧಿಗಳಿಸುವುದು ಕಷ್ಟ ಪರಿಶ್ರಮದಿಂದ, ಚಟುವಟಿಕೆ ಆದಂತೆ ಮನುಷ್ಯ ತನ್ನ ಬುದ್ಧಿ ಓಡಿಸುವನು. ಇದರಿಂದ ಧೈರ್ಯ ಆತ್ಮವಿಶ್ವಾಸ ಮೂಡಿಬರುತ್ತದೆ. ಬಸವಣ್ಣನವರು 'ಕಾಯಕವೇ ಕೈಲಾಸ' ಎಂದು ನುಡಿದರು. ನಾವು ಮಾಡುವ ಕಾರ್ಯಕ್ಷೇತ್ರದಲ್ಲಿನ ನಮ್ಮ ಪ್ರಯತ್ನ ನಮ್ಮನ್ನು ಯಶಸ್ವಿಯತ್ತ ಕರೆದೊಯ್ಯುತ್ತದೆ. ''ಪ್ರತಿಯೊಬ್ಬರು ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ಮಾಡಿದರೆ ಇತರರಿಗೆ ಹೆಚ್ಚುವ ಸಮಸ್ಯೆಗಳು ತಾನಾಗಿಯೇ ಮಾಯವಾಗುತ್ತವೆ''.

ಒಟ್ಟಿಗೆ ಪ್ರತಿಯೊಂದಕ್ಕೂ ಬೆಲೆ ತೆರಬೇಕಾಗುತ್ತದೆ. ನಮಗೇನಾದರೂ ಬೇಕೆಂದಾದರೆ ಏನಾದರೂ ಕೊಡಬೇಕು ಎಂಬುದು ಪ್ರಕೃತಿಯ ನಿಯಮ. ಪ್ರಕೃತಿಯ ಯಾವುದೇ ಕ್ರಿಯೆಗೂ ಒಂದು ಪ್ರತಿಕ್ರಿಯೆ ಇದೆ. ಹೀಗೆ ಪರಿಶ್ರಮದ ಕ್ರಿಯೆಗೆ ಸಫಲತೆ ಆಲಸ್ಯದ ಕ್ರಿಯೆಗೆ ಪ್ರತಿಕ್ರಿಯೆ ವಿಫಲತೆ. ನಾವು ನೆನಪಿನಲ್ಲಿಟ್ಟು ಕೊಂಡು ಮಾಡುವ ಕ್ರಿಯೆ, ''ಬುದ್ಧಿಗೆ ಕೆಲಸ ಕೊಟ್ಟಷ್ಟು ಪ್ರಖರ ವಾಗುತ್ತದೆ. ಶರೀರಕ್ಕೆ ಕಷ್ಟಕೊಟ್ಟಷ್ಟು ಬಲಿಷ್ಠವಾಗುತ್ತವೆ.

ಹಾಗೆಯೇ ಕಾಯಕಕ್ಕೆ ಸಮನಾದ ಬಂಧುವೂ ಇಲ್ಲ, ಕೆಲಸ ಮಾಡುತ್ತಿರುವವನು ಎಂದೂ ಕೆಡುವುದಿಲ್ಲ. ಉದ್ಯೋಗ ಕೈಗೊಳ್ಳದವನಿಗೆ ಉಂಟಾಗುವ ಬಡತನ, ರೋಗ, ದುಃಖ ಬಂಧು ವ್ಯಸನ ಮೊದಲಾದವುಗಳಿಗೆ ಅವನು ಬೆಳೆಸಿಕೊಂಡ ಸೋಮಾರಿ ತನವೇ ಕಾರಣ. ಕಾಯಕದಲ್ಲಿ ಸಂತೋಷ ಕಾಣದವನು ಸಂತೋಷವಾಗಿರಲು ಸಾಧ್ಯವೇ ಇಲ್ಲ.

An ideal mind is devils workshop ಎನ್ನುವ ಹಾಗೆ ವ್ಯಕ್ತಿ ಸೋಮಾರಿಯಾಗದೆ, ಕೀಳರಿಮೆ ತೊಡೆದು ತನ್ನ ಶಕ್ತಿ ಸಾಮರ್ಥ್ಯಕ್ಕನುಗುಣವಾಗಿ ಯಾವುದಾದರೊಂದು ಉದ್ಯೋಗವನ್ನು ಮಾಡಿದಾಗಲೇ ಈ ಸಮಾಜದಲ್ಲಿ ಆತನಿಗೊಂದು ಸ್ಥಾನಮಾನ ಎಂಬುದು ನಿಜ. ಕಾಲದಷ್ಟೇ ಕಾಯಕ ಮೌಲ್ಯಯುಕ್ತವಾದುದು. ಕಾಯಕ ಪ್ರಗತಿಯಿಂದ ಮಾತ್ರ (ಸ್ವಶ್ರಮ) ದೊರೆಯುವ ಅನ್ನವನ್ನು ಉಣ್ಣುವ ಮಾನವ ಮಾತ್ರ ಸುಖ ಸಂತೋಷ ಪಡೆದು ಶಾಂತಿಯಿಂದ ಬದುಕಲು ಸಾಧ್ಯವಾದೀತು.

★

## ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಸನ್ಮಾನ್ಯರೇ,

ಕಳೆದ ನಲವತ್ತು ವರ್ಷಗಳಿಂದ, ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಮತ್ತು ಮಾರ್ಗದರ್ಶನದಿಂದ ಶ್ರೀಮಠದ ಮುಖವಾಣಿಯಾಗಿ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಮಾಸಪತ್ರಿಕೆಗೆ ಆಜೀವ ಚಂದಾದಾರರಾಗುವುದರ ಮೂಲಕ ಪತ್ರಿಕೆಯ ಮುನ್ನಡೆಗೆ ಕಾರಣಕರ್ತರಾಗಿದ್ದೀರಿ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇವೆ.

ದಿನೇ ದಿನೇ ಮುದ್ರಣ ಸಾಮಗ್ರಿಗಳ ವೆಚ್ಚ ಅಧಿಕವಾಗುತ್ತಿದ್ದು ಅದಕ್ಕನುಗುಣವಾಗಿ ಪತ್ರಿಕೆಯ ಮುದ್ರಣದ ಬೆಲೆಯೂ ಹೆಚ್ಚಾಗುತ್ತಿದೆ. ರೂ. ೫೦೦/೬೦೦ಗಳನ್ನು ನೀಡಿದ ಆಜೀವ ಚಂದಾಹಣವನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿದ್ದು ಅದರಿಂದ ಬರುವ ಬಡ್ಡಿ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲು ಕಷ್ಟಸಾಧ್ಯವಾಗಿದೆ. ಈಗ ಬ್ಯಾಂಕಿನ ಬಡ್ಡಿ ದರವು ಕಡಿಮೆ ಆಗಿರುವ ವಿಚಾರ ತಮಗೆ ತಿಳಿದಿದೆ. ಪ್ರಸ್ತುತ ೫೦೦ ರೂ. ಠೇವಣಿಗೆ ೩೭.೫೦ ರೂ. ಹಾಗೂ ೬೦೦ ರೂ.ಗಳಿಗೆ ೪೫ ರೂ ಬರುತ್ತದೆ. ಈ ಬಡ್ಡಿ ಹಣದಿಂದ ೧೨ ಸಂಚಿಕೆಗಳಿಗೆ ತಗಲುವ ವೆಚ್ಚವನ್ನು ಸರಿದೂಗಿಸಲು ಕಷ್ಟವಾಗಿದೆ. ಪ್ರಸ್ತುತ ಶೇಕಡ ೫೦ರಷ್ಟು ನಷ್ಟವಾಗುತ್ತಿದೆ ಎಂಬ ಅಂಶವನ್ನು ವಿನಯ ಪೂರ್ವಕವಾಗಿ ತಮ್ಮ ಗಮನಕ್ಕೆ ತರಬಯಸುತ್ತೇವೆ.

ಪ್ರಸ್ತುತ ಶ್ರೀಮಠದಲ್ಲಿ ೮೦೦೦ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವ್ಯಭವಿಷ್ಯವನ್ನು ರೂಪಿಸುವಲ್ಲಿ ಪರಮಪೂಜ್ಯ ಶ್ರೀಗಳವರು ತಮ್ಮನ್ನು ಅರ್ಪಿಸಿಕೊಂಡು ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ತಾವು ದಯವಿಟ್ಟು ಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಶ್ರೇಷ್ಠ ಸೇವೆಯನ್ನು ಗಮನದಲ್ಲಿಟ್ಟುಕೊಂಡು 'ಸಿದ್ಧಗಂಗಾ' ಪ್ರಕಟಣೆಗೆ ಒದಗಿರುವ ಆರ್ಥಿಕ ಸಂಕಷ್ಟವನ್ನು ದೂರಮಾಡಿ ಸಿದ್ಧಗಂಗಾ ಮತ್ತಷ್ಟು ಅರ್ಥಪೂರ್ಣವಾಗಿ ಪ್ರಕಟವಾಗಲು ನೆರವು ಮತ್ತು ಸಹಕಾರ ನೀಡಬೇಕಾಗಿ ಕಳಕಳಿಯಿಂದ ಕೋರುತ್ತೇವೆ.

ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಪ್ಪಣೆಕೊಡಿಸಿದಂತೆ ಜುಲೈ ೨೦೦೪ರಿಂದ ಆಜೀವ ಚಂದಾಹಣವನ್ನು ೬೦೦ ರಿಂದ ೧೦೦೦ ರೂ.ಗಳಿಗೆ ಹೆಚ್ಚಿಸಲಾಗಿದೆ.

ಈಗಾಗಲೇ ಆಜೀವ ಚಂದಾದಾರಾಗಿರುವ ಪತ್ರಿಕಾಭಿಮಾನಿಗಳು ೧೦೦೦ ರೂ.ಗಳಿಗೆ ಸರಿಹೊಂದುವಂತೆ. ಅಂದರೆ ಹಿಂದೆ ಸಂದಾಯ ಮಾಡಿದ್ದ ೫೦೦ ರೂ. ಮತ್ತು ೬೦೦ ರೂ.ಗಳನ್ನು ಕಳೆದು ಉಳಿದ ಹಣವನ್ನು ರೂ. ೫೦೦ ಮತ್ತು ರೂ. ೪೦೦ಗಳನ್ನು ನಗದು/ಎಂಓ/ಡಿ.ಡಿ./ಚೆಕ್ ಮೂಲಕ ಸಿದ್ಧಗಂಗಾ ಮಾಸಪತ್ರಿಕೆಯ ಹೆಸರಿನಲ್ಲಿ ಕಳುಹಿಸಬೇಕಾಗಿ ಕೋರಲಾಗಿದೆ. ತಾವು ಹಣ ಕಳುಹಿಸುವಾಗ ತಮ್ಮ ವಿಳಾಸದಲ್ಲಿ ಎಲ್.ಎಂ. ಸಂಖ್ಯೆಯನ್ನು ತಪ್ಪದೆ ನಮೂದಿಸಬೇಕು. ತಾವು ನಮ್ಮ ಮನವಿಗೆ ಸ್ಪಂದಿಸಿ ಪತ್ರಿಕೆಯ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸುವಿರೆಂದು ಭಾವಿಸಿದ್ದೇವೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು





# ಸ್ತ್ರೀ ಸಮಾನತೆ : ಒಂದು ಚಿಂತನೆ

– ಲಲಿತಾ ಸಿದ್ಧಬಸವಯ್ಯ
ತುಮಕೂರು.

ಸಂತಾನದ ಉತ್ಪತ್ತಿಗಾಗಿ ಮಾತ್ರ ಪ್ರಕೃತಿ ಎಲ್ಲ ಜೀವಿಗಳಲ್ಲಿಯೂ ಗಂಡು ಮತ್ತು ಹೆಣ್ಣು ಎಂಬ ಎರಡು ಜಾತಿಗಳನ್ನು ಸೃಷ್ಟಿಸಿದೆಯೇ ಹೊರತು, ಇನ್ನ್ಯಾವ ಮಹತ್ತರ ಕಾರಣವೂ ಈ ರೀತಿಯ ಲಿಂಗಭೇದದಲ್ಲಿಲ್ಲ. ನೀವು ಒಂದೊಂದಾಗಿ ಗಮನಿ ಸುತ್ತ ಬನ್ನಿ, ಅತಿ ಸಣ್ಣ ಹುಳುವಿನಿಂದಾರಂಭಿಸಿ ಆನೆಯಂಥ ದೊಡ್ಡ ಪ್ರಾಣಿಯವರೆಗೆ ಹೆಣ್ಣು ಜಾತಿ ಸಂತಾನೋತ್ಪತ್ತಿ ಮಾಡುತ್ತದೆ, ಗಂಡು ಅದಕ್ಕೆ ಪ್ರೇರಕವಾಗುತ್ತದೆ. ಗಂಡು ಪ್ರೇರಕ-ಹೆಣ್ಣು ಧಾರಕ. ತಮ್ಮ ಸಂತಾನದ ಅಭಿವೃದ್ಧಿಯ ಮೂಲ ಉದ್ದೇಶ ಮುಗಿದ ಮೇಲೆ ಅವುಗಳ ಪಾಡು ಅವುಗಳದ್ದು ಅಷ್ಟೆ, ಯಾವ ಪ್ರಾಣಿ ಸಂಕುಲದಲ್ಲಿಯೂ ಹೆಣ್ಣು ಜೀವಮಾನ ಪೂರ್ತಿ ತಾನು ಹಡೆದ ಮರಿಗಳನ್ನೇ ಪೋಷಿಸುತ್ತ ಕೂಡುವುದಿಲ್ಲ. ಅವುಗಳಿಗೆ ಸ್ವಸಾಮರ್ಥ್ಯ ಬಂದ ಮೇಲೆ ಅವುಗಳು ತಮ್ಮ ಜೀವನ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತದೆ.

ಆದರೆ ಮನುಷ್ಯನೆಂಬ ಪ್ರಾಣಿಗೆ ಮಾತ್ರ ಪ್ರಕೃತಿಯ ವಿಕಾಸದಲ್ಲಿ ಉತ್ತಮ ಪಾತ್ರ ದೊರೆತು, ದೈಹಿಕ ಕಾಮನೆ ಮೀರಿ ಪ್ರೀತಿ, ಪ್ರೇಮ, ರಾಗ, ದ್ವೇಷಗಳೆಂಬ ಮನೋಭಾವನೆಗಳೂ ಕೊಡಲ್ಪಟ್ಟ ಕಾರಣ ಮನುಷ್ಯ ತನ್ನ ಸಂತಾನದ ಮೇಲಿನ ಮೋಹವನ್ನು ಅತಿಯಾಗಿಯೇ ಬೆಳೆಸಿಕೊಂಡ. ಮನುಷ್ಯ ವರ್ಗದಲ್ಲಿ ಕೂಡ ಪ್ರಕೃತಿ ಹೆಣ್ಣು-ಗಂಡು ಎಂಬ ಲಿಂಗಗಳನ್ನು ಸೃಷ್ಟಿಸಿ ಸಂತಾನಾಭಿವೃದ್ದಿಗೆ ಸಿದ್ಧತೆ ಮಾಡಿತು. ಆದರೆ ತನ್ನ ಮಕ್ಕಳನ್ನು ಹಾಗೂ ಇತರೆ ಸಂಬಂಧಗಳನ್ನು ಮನುಷ್ಯ ಗಾಢವಾಗಿ ಪ್ರೀತಿಸತೊಡಗಿದ್ದರಿಂದ, ಬೇರೆ ಪ್ರಾಣಿಗಳಂತೆ ನಿರ್ಲಿಪ್ತ ವಾಗಿರದೆ ತನ್ನ ಸಂತಾನದ ಪೋಷಣೆಗೆ ಹೆಚ್ಚು ಗಮನ ನೀಡಿದ. ಹೀಗೆ ಗಮನ ನೀಡುವಾಗ ಮಗುವಿನ ಆಹಾರ, ಲಾಲನೆ-ಪಾಲನೆ, ಮನೆಯೊಳಗಿನ ರಕ್ಷಣೆಯ ಕೆಲಸ ಹೆಂಗಸಿಗೂ, ಈ ಮಗುವಿಗೆ ಬೇಕಾದ ಅಗತ್ಯಗಳ ಸಂಪಾದನೆ ಮತ್ತು ಬಾಹ್ಯ ರಕ್ಷಣೆಯ ಕೆಲಸ ಗಂಡಸಿನ ಪಾಲಿಗೂ ಬಂದಿತು. ಅಂದರೆ ಪ್ರಕೃತಿಯ ದೃಷ್ಟಿಯಲ್ಲಿ ಸಂತಾನದ ಮುಂದುವರಿಕೆಗಾಗಿ ಹೆಣ್ಣು-ಗಂಡು ಎರಡೂ ಲಿಂಗಗಳು ಸಮಾನ ಜವಾಬ್ದಾರಿ ಹೊರಬೇಕಾದ ಸಮಾನತೆಯ ಜವಾಬ್ದಾರಿಯನ್ನು ನಿರ್ವಹಿಸುತ್ತ ಬಂದಿರುವುದನ್ನು ಕಾಣಬಹುದಾಗಿದೆ.

ಬರಬರುತ್ತ ಮನೆಯೊಳಗಿನ ಕೆಲಸ ಮಾಡುವ ಹೆಣ್ಣನ್ನು ಎರಡನೆ ದರ್ಜೆಯದೆಂದೂ. ಹೊರಗಡೆ ಸಂಪಾದಿಸಿ ತನ್ನ ಕುಟುಂಬವನ್ನು ರಕ್ಷಿಸುವ ಗಂಡಸಿನ ಶ್ರಮ ಪ್ರಥಮ ದರ್ಜೆಯದೆಂದು ಭಾವಿಸಲ್ಪಟ್ಟಿತು! ಇದೊಂದು ಸಂಕುಚಿತ ಮನೋಭಾವ. ಸಂತಾನದ ಪೋಷಣೆಗೆ ಗಂಡಸಿನಷ್ಟೆ ಅಥವಾ ಅದಕ್ಕಿಂತಲೂ ಹೆಚ್ಚಾಗಿಯೇ ಮನೆಯೆಂಬ ಚೌಕಟ್ಟಿನೊಳಗೇ ಶ್ರಮವಹಿಸುವ ಹೆಂಗಸಿನ ಶ್ರಮ ಅನಾದರಕ್ಕೆ ಒಳಗಾಗಿದ್ದು ಯಾವಾಗ? ಮಾನವ ಇತಿಹಾಸದ ಯಾವ ಹಂತದಲ್ಲಿ ಇಂತಹ ಭೇದ-ಭಾವಗಳು ಹುಟ್ಟಿಕೊಂಡವು ಎಂಬುದಕ್ಕೆ ನಿಖರವಾದ ಪುರಾವೆ ದೊರೆತಿಲ್ಲ. ಆದರೆ ಹೊರುವ, ಹೆರುವ, ದೈಹಿಕ ಯಾತನೆಯನ್ನು ಅನಿವಾರ್ಯವಾಗಿ ಅನುಭವಿಸಲೇ ಬೇಕಾದ ಹೆಣ್ಣು ಸಹಜವಾಗಿಯೇ ಗಂಡಸಿಗಿಂತ ದೈಹಿಕ ಸಾಮರ್ಥ್ಯದಲ್ಲಿ ಸ್ವಲ್ಪ ಹಿಂದೆ ಉಳಿದಳು. ಋತುಚಕ್ರ, ಹೆರಿಗೆ, ಗರ್ಭಪಾತ, ಇದರಿಂದುಂಟಾಗುವ ಯಾತನೆಗಳಿಂದ ಹೊರತಾಗಿದ್ದ ಗಂಡು ದೇಹಬಲದಲ್ಲಿ ಮುಂದಿರುವುದು ಸಹಜವೇ ಆಗಿದ್ದು ಈ ದೇಹಬಲದ ಕಾರಣದಿಂದಲೇ ಹೆಣ್ಣು ಕೆಳದರ್ಜೆಗೆ ನೂಕಲ್ಪಟ್ಟ ಳೆಂದು ಕಾಣುತ್ತದೆ.

ನಮ್ಮ ಹಳ್ಳಿಗಳ ಹೆಣ್ಣು ಮಕ್ಕಳು ಮನೆಗೆಲಸದ ಸಮ ಸಮಯಕ್ಕೆ ಹೊರಗಿನ ಬೇಸಾಯದ ಕೆಲಸಗಳನ್ನು ಮಾಡಿದರೂ ಅವರು ಕೇವಲ ಹೆಣ್ಣಾಳು. ಪಟ್ಟಣದ ಹೆಂಗಸರೇನೂ ಸುಖಿಗಳಲ್ಲ. ಮನೆಯಲ್ಲಿ ಸಕಲ ಜವಾಬ್ದಾರಿಯನ್ನೂ ನಿಭಾಯಿಸಿ ಹೊರಗೆ ಉದ್ಯೋಗ ಮಾಡಿ ಬರುವ ಹೆಂಗಸು ದಿನದ ಅಂತ್ಯದಲ್ಲಿ ಹಿಂಡಿದ ಬಸಳೆ ಸೊಪ್ಪಾಗಿರುತ್ತಾಳೆ. ಅಲ್ಲಿ ಕೂಡಾ ವಿಶೇಷ ರಿಯಾಯಿತಿಗಳೇನೂ ಅವಳಿಗೆ ಸಿಕ್ಕಿಲ್ಲ.

ಹಾಗಾದರೆ ಏನು ಮಾಡಬೇಕು? ಈ ಪ್ರಶ್ನೆಯೆ ಮಹಿಳಾ ಸಬಲೀಕರಣದ ಮೂಲ ಬೀಜ ಮಂತ್ರ. 'ಸಮಾನ ಕೆಲಸಕ್ಕೆ ಸಮಾನ ಗೌರವ ಕೊಡಿ ಯಾವುದೇ ಕ್ಷೇತ್ರವಾಗಿರಲಿ, ಮನೆಯೊಳಗೆ, ಹೊರಗೆ, ಹೊಲ, ಗದ್ದೆ, ಕಾರ್ಖಾನೆ, ರಾಜಕೀಯ, ಕಲೆ, ಶಿಕ್ಷಣ, ಆರೋಗ್ಯ, ಪ್ರಚಾರ, ಗೌರವ ಇಂತಹ ಎಲ್ಲಾ ಮೂರ್ತ ಮತ್ತು ಅಮೂರ್ತ ಕ್ಷೇತ್ರಗಳಲ್ಲಿ ಹೆಂಗಸಿಗೆ ಸಮಾನ ಅವಕಾಶ ಕೊಡಿ ಮತ್ತು ಅನುಕಂಪ ಆಧಾರಿತ ಮಣೆ ಹಾಕದೆ, ಅರ್ಹತೆಗೆ ತಕ್ಕಂತೆ ಅವಳಿಗೆ ದರ್ಜೆ ಕೊಡಿ. ಇದೇ ನಿಜವಾದ ಅರ್ಥದಲ್ಲಿ 'ಸಮಾನತೆ'. ಅದು ಗಂಡಸಾದವನು ಅಡುಗೆ ಮಾಡು ಎಂದೋ, ಮಕ್ಕಳನ್ನು ಹೆರು ಎಂದೋ ಕೇಳುವುದಿಲ್ಲ, ಆದರೆ ಈ ಎಲ್ಲಾ ಕೆಲಸಗಳೂ ಕೂಡಾ ಗಂಡಸು ಮಾಡುವ ಸಂಪಾದನೆ

ಕೆಲಸಗಳಷ್ಟೆ ಮುಖ್ಯವಾದವು. ಒಂದು ಕುಟುಂಬದ ಒಳಿತಿಗೆ ಇವೆರಡೂ ಬೇಕು ಮತ್ತು ಈ ಎಲ್ಲಾ ಕೆಲಸಕ್ಕೂ ಸಮಾನ ಗೌರವಬೇಕು ಯಾವುದೂ ಎರಡನೆಯ ದರ್ಜೆಯಲ್ಲ. ಒಟ್ಟಾರೆ ಸಮಾಜ, ದೇಶ, ಖಂಡ, ಭೂಮಂಡಲ ಒಟ್ಟು ಪ್ರಕೃತಿಯ ಸಮತೋಲನಕ್ಕೆ 'ಹೆಣ್ಣು ದುಡಿಮೆ' – ಗಂಡು ದುಡಿಮೆ' ಸಮಾನ ಅಗತ್ಯವಾದುದ್ದು ಎಂಬ ಜಾಗೃತಿ ಎಲ್ಲರಲ್ಲೂ ಹುಟ್ಟಬೇಕು.

ಪ್ರತಿವರ್ಷ ವಿಶ್ವದಾದ್ಯಂತ ಆಚರಿಸುವ "ಮಹಿಳಾ ದಿನಾಚರಣೆ" ಇದೇ ತಳಹದಿಯ ಮೇಲೆಯೇ ಆರಂಭ ಗೊಂಡದ್ದು. ಯುರೋಪಿನ ಕತ್ತಲು ತುಂಬಿದ್ದ ಇಕ್ಕಟ್ಟಿನ ಕಾರ್ಖಾನೆ ಯಲ್ಲಿ ಗಂಡಸರ ಸಮಸಮ ಕೆಲಸ ಮಾಡುವ ಹೆಂಗಸರಿಗೆ ಕೂಲಿಯಲ್ಲಿ ಮಾತ್ರ ಕಡಿಮೆ ಹಣ ಕೊಡುತ್ತಿದ್ದುದರ ವಿರುದ್ಧ ಹೆಂಗಸರು ಪ್ರತಿಭಟಿಸಿದ ದಿನ ಮಾರ್ಚ್ ೮ನ್ನು 'ವಿಶ್ವ ಮಹಿಳಾ ದಿನಾಚರಣೆ' ಎಂದು ಆಚರಿಸಲಾಗುತ್ತಿದೆ. ವಾಸ್ತವವಾಗಿ ಈಗ ಮಹಿಳೆಯ ಸ್ಥಿತಿಯಲ್ಲಿ ಅನೇಕ ಬದಲಾವಣೆಗಳಾಗಿವೆ. ಇಂತಹ ಸಮಾನತೆಯ ಮಾತಾಡಿದಾಗ ಅದನ್ನು ಲೇವಡಿ ಮಾಡಿ ತಮಾಷೆಯ ವಸ್ತು ಮಾಡುತ್ತಿದ್ದ ದಿನಗಳು ಈಗಿಲ್ಲ. ಸ್ವತಃ ಸರ್ಕಾರ ಮಹಿಳೆಯರ ಅಭಿವೃದ್ಧಿಗಾಗಿಯೇ ಪ್ರತಿವರ್ಷ ಶೇ. ೮ರಷ್ಟು ಬಜೆಟ್ಟನ್ನು ಮೀಸಲಾಗಿಟ್ಟು ಮಹಿಳಾ ಕಲ್ಯಾಣ ಇಲಾಖೆಯೆಂದು ಪ್ರತ್ಯೇಕ ಇಲಾಖೆ ತೆಗೆದಿದೆ ಮತ್ತು ಸರ್ಕಾರೇತರ ಸಂಸ್ಥೆಗಳಾದ ಸ್ವಯಂ ಸೇವಾ ಸಂಘಗಳು, ಸ್ವತಂತ್ರ ಕಾರ್ಯನಿರ್ವಹಿಸುವ ಜನಶಿಕ್ಷಣ ಸಂಸ್ಥೆಗಳು, ಮಹಿಳೆಯರ ಅಭಿವೃದ್ಧಿಯನ್ನೇ ಗುರಿ ಯಾಗಿಟ್ಟುಕೊಂಡು ಕೆಲಸ ಮಾಡುತ್ತಿವೆ. ಇಷ್ಟಾದರೂ ಸರ್ಕಾರದ ವರದಿಗಳಲ್ಲಿ ಕೊಡುವ ಅಂಕಿ ಅಂಶಗಳಿಗೂ, ವಾಸ್ತವವಾಗಿರುವ ಅಂಕಿ-ಅಂಶಗಳಿಗೂ ತಾಳಮೇಳವಂತೂ ಹೊಂದಿಕೆಯಾಗುತ್ತಿಲ್ಲ. ಹಾಗಾದರೆ ಇಂತಹ "ಅರೆ ಎಚ್ಚರ"ದ ಈಗಿನ ಸ್ಥಿತಿಯಲ್ಲಿ ಒಬ್ಬ ಮಹಿಳೆಯ ಕರ್ತವ್ಯವೇನು?

ಈ ಪ್ರಶ್ನೆಯನ್ನು ಪ್ರತಿ ಹೆಂಗಸೂ ಹಾಕಿಕೊಳ್ಳಬೇಕು. ಈ ರೀತಿ ಪ್ರಶ್ನಿಸಿಕೊಳ್ಳುವ ಮನೋಧರ್ಮ ಬರುವುದೇ ತಿಳುವಳಿಕೆ ಯಿಂದ. ಈ ತಿಳುವಳಿಕೆ ಬರುವುದು ವಿದ್ಯೆಯಿಂದ. ಅಂದರೆ ಮೂಲಭೂತವಾಗಿ ಬದಲಾವಣೆಯಾಗಬೇಕಾಗಿರುವುದು ಶಿಕ್ಷಣ ದಲ್ಲಿ. ಶಿಕ್ಷಣವು ಪ್ರತಿ ಹೆಣ್ಣು ಮಗುವಿನ ಹಕ್ಕು ಎಂಬುದನ್ನು 'ಸಂವಿಧಾನದ ವಿಧಿಯಾಗಿ' ಅಂಗೀಕರಿಸಬೇಕಾಗಿದೆ. ಇದು ಘೋಷಣೆಯಿಂದಲ್ಲ, ಆಚರಣೆಯಿಂದ ಆಗಬೇಕಾದ ಕೆಲಸ. ನನ್ನ ಮಗಳನ್ನು, ನನ್ನ ತಂಗಿಯನ್ನು, ನನ್ನ ಸೊಸೆಯನ್ನು ನನ್ನ ಕುಟುಂಬದ ಹೆಂಗಸರನ್ನು ವಿದ್ಯಾವಂತರನ್ನಾಗಿ ಮಾಡುವುದು ಮಾನವಂತನ ಮೊದಲ ಕರ್ತವ್ಯವಾಗಬೇಕು.

ಹೀಗೆ ಶಿಕ್ಷಣ ದೊರೆತ ಹುಡುಗ/ಹುಡುಗಿಯರು ಗಿಳಿ ಪಾಠದ 'ಪಂಜರಾ ಶುಕ'ಗಳಾದಂತೆ ನೋಡಿಕೊಳ್ಳಬೇಕು. ಐದನೇ ತರಗತಿಯಿಂದಲೆ 'ಸ್ತ್ರೀ ಸಮಾನತೆ' ಕುರಿತಾದ ಸರಳ ಪಾಠಗಳನ್ನು ಪಠ್ಯದಲ್ಲಿಯೇ ಸೇರಿಸಬೇಕು. ಐದನೆಯ ತರಗತಿಯಿಂದ ಹನ್ನೆರಡನೆಯ ತರಗತಿಯವರೆಗೆ ಪಠ್ಯಪುಸ್ತಕ ಗಳಲ್ಲಿ ಕಡ್ಡಾಯವಾಗಿ ೧. ಸ್ತ್ರೀ ಸಮಾನತೆ, ೨. ಪರಿಸರ ಸಂರಕ್ಷಣೆ, ೩. ವೈಜ್ಞಾನಿಕ ದೃಷ್ಟಿಕೋನ, ೪. ದೇಶಪ್ರೇಮ, ೫. ಸ್ವಚ್ಛತೆ ಈ ವಿಷಯಗಳ ಬಗ್ಗೆ ಪಠ್ಯದಲ್ಲಿ ಸೇರಿಸಬೇಕು.

ಪ್ರತಿ ವಿದ್ಯಾವಂತ ಮಹಿಳೆಯೂ ತನ್ನ ಹೆಣ್ಣು ಮಕ್ಕಳನ್ನಂತೂ ಸರಿಯೇಸರಿ, ಅದರ ಜೊತೆಗೆ ತನಗೆ ತಿಳಿದ ಒಬ್ಬಳು ಅನಕ್ಷರಸ್ಥೆ ಯನ್ನಾದರೂ ಅಕ್ಷರಸ್ಥಳಾಗಿ ಮಾಡಲು ಪ್ರಯತ್ನಿಸಬೇಕು. ಅನೇಕ ವೇಳೆ ನಾವು ಅಂದರೆ ಮಹಿಳೆಯರು ಪ್ರತಿಯೊಂದರಲ್ಲೂ ಸರ್ಕಾರವೋ-ಸಂಸ್ಥೆಯೋ ಕೈ ಹಾಕಿ ಮಾರ್ಗ ತೋರಿಸಲೆಂಬ ಉದಾಸೀನತೆ ತೊರೆದು ತನ್ನ ಕೈಲಾದಷ್ಟು ತನ್ನ ಸುತ್ತಲಿನ ಚಿಕ್ಕದೊಂದು ವಲಯದಲ್ಲಾದರೂ ಕೆಲವು ಅಭಿವೃದ್ಧಿ ಕೆಲಸಗಳನ್ನು ಹಮ್ಮಿಕೊಳ್ಳಬೇಕು.

★

## ಬೆಂಗಳೂರಿನಲ್ಲಿ 2005ರ ಸಿದ್ಧಗಂಗಾ ಪಾಕೆಟ್ ಕ್ಯಾಲೆಂಡರ್ ದೊರೆಯುವ ಸ್ಥಳ :

ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘವು ಪ್ರಕಟಿಸಿರುವ 2005ರ ಸಿದ್ಧಗಂಗಾ ಪಾಕೆಟ್ ಕ್ಯಾಲೆಂಡರ್‌ಗಳನ್ನು ಬೆಂಗಳೂರಿನಲ್ಲಿ ಈ ಕೆಳಕಂಡ ಸ್ಥಳಗಳಲ್ಲಿ ಮಾರಾಟಕ್ಕೆ ವ್ಯವಸ್ಥೆ ಮಾಡಲಾಗಿದೆ. ಆಸಕ್ತಿ ಉಳ್ಳವರು ಕೊಂಡುಕೊಳ್ಳಲು ಈ ಮೂಲಕ ಕೋರಲಾಗಿದೆ.

ಪ್ರತಿ ದೊರೆಯುವ ಸ್ಥಳ :

1. ಸಿದ್ಧಗಂಗಾ ಸಮುದಾಯ ಭವನ
   (ಪುಷ್ಪಾಂಜಲಿ ಟಾಕೀಸ್ ಪಕ್ಕ)
   ಶಿವನಹಳ್ಳಿ, ಬಸವೇಶ್ವರ ನಗರ,
   ಬೆಂಗಳೂರು.
2. ಜಗಜ್ಯೋತಿ ಪ್ರಾರ್ಥನಾ ಮಂದಿರ
   ಟೆಲಿಫೋನ ಎಕ್ಸ್‌ಚೇಂಜ್ ಪಕ್ಕ
   ವಿಜಯನಗರ,
   ಬೆಂಗಳೂರು – 560 040.
3. ಗೀತಾಂಜಲಿ ಗ್ರಾಫಿಕ್ಸ್
   ನಂ. 4, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
   ಗೋಕುಲ, ಮತ್ತಿಕೆರೆ,
   ಬೆಂಗಳೂರು – 560 054.





# ಜಾಗತಿಕ ಉಷ್ಣತೆ ಮತ್ತು ಓಜೋನ್ ಪದರ ರಕ್ಷಣೆ

– ಡಾ. ಸಿ. ದಿವಾಕರ್
ವಿಜ್ಞಾನಿ, ವಸ್ತುವಿಜ್ಞಾನ ವಿಭಾಗ,
ರಾಷ್ಟ್ರೀಯ ವೈಮಾಂತರಿಕ್ಷ ಪ್ರಯೋಗಶಾಲೆ,
ಬೆಂಗಳೂರು – 560 017.

ಪರಿಸರ ರಕ್ಷಣೆ ಹಿಂದೆಂದಿಗಿಂತಲೂ ಇಂದು ಅತಿಮುಖ್ಯವಾದ ಸಮಸ್ಯೆಯಾಗಿ ಮಾನವನನ್ನು ಕಾಡುತ್ತಿದೆ. ವಿಶ್ವದಾದ್ಯಂತ ಕಾಣುತ್ತಿರುವ ಅನೇಕ ವಿಧವಾದ ಸಮಸ್ಯೆಗಳಿಗೆ, ಪರಿಸರವನ್ನು ನಾವು ಸರಿಯಾಗಿ ಬಳಸಿಕೊಳ್ಳದಿರುವುದೇ ಕಾರಣವಾಗಿದೆ. ಆದರೆ, ಪರಿಸರದ ಸಮಸ್ಯೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಲ್ಲಿ ಮಾನವನು ಯಶಸ್ವಿಯಾಗಿರುವುದು ಕಳೆದ ಶತಮಾನದ ಒಂದು ಮಹತ್ವದ ಸಾಧನೆ ಎಂದೇ ಹೇಳಬೇಕು. ಈ ದಿಸೆಯಲ್ಲಿ ಹೆಚ್ಚುತ್ತಿರುವ ಜಾಗತಿಕ ಉಷ್ಣತೆಯ ನಿಯಂತ್ರಣ ಹಾಗೂ ನಮಗೆಲ್ಲಾ ಸುರಕ್ಷಾ ಕವಚವಾಗಿರುವ ಓಜೋನ್ ಪದರ ರಕ್ಷಣೆಯ ಎಲ್ಲ ವಿಚಾರಗಳನ್ನು ಸರಳವಾಗಿಯೂ, ವೈಜ್ಞಾನಿಕವಾಗಿಯೂ ಈ ಲೇಖನದಲ್ಲಿ ಮಂಡಿಸಲಾಗಿದೆ.

ಪರಿಸರವನ್ನು ಕುರಿತಾದ ಚಿಂತನೆಗಳಲ್ಲಿ ಓಜೋನ್ ಪದರದ ರಕ್ಷಣೆ, ಜಾಗತಿಕ ಉಷ್ಣತೆ ಎಂಬ ವಿಷಯಗಳು ಪದೇ ಪದೇ ಪ್ರಸ್ತಾಪಿಸಲ್ಪಡುತ್ತಿವೆ. ಈ ವಿಚಾರಗಳಿಗೆ ಸಂಬಂಧಿಸಿದಂತೆ ಕಾಡುವ ಪ್ರಶ್ನೆಗಳೆಂದರೆ :

೧. ಹವಾಗುಣ ಮತ್ತು ಉಷ್ಣತೆಗಳಲ್ಲಿನ ವೈಪರೀತ್ಯಗಳ ಕಾರಣ ಗಳನ್ನು ಗುರುತಿಸಲು ಸಾಧ್ಯವೆ?
೨. ಹಸಿರುಮನೆ ಪರಿಣಾಮ ಎಂದರೇನು?
೩. ವಾತಾವರಣದ ಉಷ್ಣತೆಯ ಬದಲಾವಣೆಗಳಿಗೆ ಮಾನವನ ದೈನಂದಿನ ಕಾರ್ಯಚಟುವಟಿಕೆಗಳು ಹೇಗೆ ಕಾರಣವಾಗ ಬಹುದು?
೪. ಓಜೋನ್ ಕುಳಿ ಎಂದರೇನು?
೫. ಓಜೋನ್ ಪದರದ ಕ್ಷೀಣತೆಯ ಸಮಸ್ಯೆಯನ್ನು ಹೇಗೆ ಎದುರಿಸಬೇಕು?

ಭೂ ವಾತಾವರಣವು ಬಿಸಿಯಾಗುವಿಕೆ, ಓಜೋನ್ ಪದರದ ಕ್ಷೀಣತೆ ಮತ್ತು ಇವುಗಳಿಂದ ಹವಾಮಾನದ ಮೇಲೆ ಆಗುವ ಪರಿಣಾಮ ಮುಂತಾದ ವಿಷಯಗಳನ್ನು ಇಲ್ಲಿ ವೈಜ್ಞಾನಿಕ ವಾಗಿ ವಿಶ್ಲೇಷಿಸಲಾಗಿದೆ. ಈ ಪರಿಣಾಮಗಳನ್ನು ಕನಿಷ್ಠಗೊಳಿಸಲು ಸರಕಾರ ಗಳು, ಕೈಗಾರಿಕೆಗಳು ಹಾಗೂ ಸಾರ್ವಜನಿಕರು ತೆಗೆದುಕೊಳ್ಳ ಬೇಕಾದ ಕ್ರಮಗಳಿಗೆ ಕೆಲವು ಸಲಹೆಗಳನ್ನೂ ಸೂಚಿಸ ಲಾಗಿದೆ.

ಒಂದು ನಿರ್ದಿಷ್ಟ ಸ್ಥಳದ ವಾತಾವರಣ ಪರಿಸ್ಥಿತಿಯ (ಹಲವಾರು ತಿಂಗಳು ಅಥವಾ ವರ್ಷಗಳು) ಸರಾಸರಿಯನ್ನು ಅಲ್ಲಿನ ಹವಾಗುಣ ಎಂದು ಕರೆಯುತ್ತಾರೆ. ಬೇಸಿಗೆಯಲ್ಲಿ ಶುಷ್ಕ, ಮಳೆಗಾಲದಲ್ಲಿ ತಂಪು ಶೀತ, ಚಳಿಗಾಲದಲ್ಲಿ ಚಳಿಗಾಳಿ ಮುಂತಾಗಿ ನಾವು ಹವಾಮಾನವನ್ನು ಗುರುತಿಸುತ್ತೇವೆ. ಈ ಬದಲಾವಣೆಗಳು ಹೀಗೇ ಇರುತ್ತವೆ ಎಂದು ನಾವು ನಂಬಿಬಿಡುತ್ತೇವೆ. ಅನೇಕ ವೇಳೆ ಪ್ರವಾಹಗಳು, ಸಾಗರದ ಅಲೆಗಳ ಹೊಡೆತ, ಬರಗಾಲ, ಜ್ವಾಲಾಮುಖಿ ಮುಂತಾದ ಪ್ರಕೃತಿ ವಿಕೋಪಗಳು ಹವಾಗುಣ ಅಥವಾ ವಾತಾವರಣ ವೈಪರೀತ್ಯಗಳಿಂದಾಗುತ್ತವೆ. ಸಾಗರಗಳ ಮೇಲ್ಮೈ ಉಷ್ಣತೆಯು ಮಳೆ ಪ್ರಮಾಣದ ಮೇಲೆ ಪರಿಣಾಮ ಬೀರುತ್ತದೆ. ಸುಮಾರು ೩ ರಿಂದ ೫ ವರ್ಷಗಳಿಗೊಮ್ಮೆ ಸಾಗರದ ಮೇಲಿನ ಬಹಳಷ್ಟು ನೀರಿನ ಉಷ್ಣತೆ ಜಾಸ್ತಿಯಾಗಿ ಸುಮಾರು ಒಂದು ವರ್ಷದವರೆಗೂ ಶಾಖ ಉಳಿದಿರುತ್ತದೆ. ಸಾಮಾನ್ಯವಾಗಿ ಕ್ರಿಸ್ಮಸ್ ವೇಳೆಗೆ ಈ ಉಷ್ಣತೆ ಜಾಸ್ತಿಯಾಗುವ ಪರಿಣಾಮ ಕಂಡುಬರುವುದ ರಿಂದ ಇದನ್ನು ಎಲ್‌ನಿನೋ ಘಟನೆ ಎಂದು ಕರೆಯುತ್ತಾರೆ. ಇದರ ಪರಿಣಾಮದಿಂದ ಪ್ರವಾಹ ಹಾಗೂ ಕ್ಷಾಮಗಳು ಉಂಟಾಗ ಬಹುದೆಂದೂ ನಂಬಲಾಗಿದೆ. ೧೯೮೨-೮೩ರ ಎಲ್‌ನಿನೋ ಪರಿಣಾಮವಾಗಿ ಸಾಗರಗಳ ಮೇಲ್ಮೈ ಉಷ್ಣತೆಯು ೭° ಸೆ. ನಷ್ಟು ಹೆಚ್ಚಿತು. ಹೀಗೆ ಉಷ್ಣತೆಯು ಹೆಚ್ಚುವುದರಿಂದ ಸಾಗರದಾಳದ ಪೌಷ್ಟಿಕ ಪದಾರ್ಥಗಳು ಮೇಲ್ಮೈಗೆ ಬರದೆ ಸಾಗರಗಳಲ್ಲಿ ಮೀನು ಗಳು ಸಾಯುತ್ತವೆ.

### *ಜಾಗತಿಕ ಉಷ್ಣತೆ*

ಸೂರ್ಯನಿಂದ ಬರುವ ವಿಕಿರಣಗಳು ಭೂಮಿಯನ್ನು ತಲುಪಿ, ಅದನ್ನು ಬಿಸಿ ಮಾಡುತ್ತದೆ. ನಂತರ ಭೂಮಿಯಿಂದ

ಹೊರಟ ವಿಕಿರಣಗಳು ವಾತಾವರಣವನ್ನು ತಲುಪುತ್ತವೆ. ಭೂಮಿಯಿಂದ ಹೊರಹೊಮ್ಮುವ ಶಾಖ ಶಕ್ತಿಯ ವಿಸರಣವು ಭೂಮಿಯ ಉಷ್ಣತೆಯನ್ನು ಅವಲಂಬಿಸಿರುತ್ತದೆ. ಭೂಮಿಯ ಮೇಲಿನ ವಸ್ತುಗಳು ಹೀರುವ ಶಾಖದ ಪರಿಣಾಮವನ್ನು ಅವುಗಳು ಪಸರಿಸುವ ವಿಸರಣವು ಅವಲಂಬಿಸಿರುತ್ತದೆ. ಹೀಗೆ ಸೂರ್ಯನಿಂದ ಬರುವ ವಿಕಿರಣಗಳು ಹಾಗೂ ಭೂಮಿಯಿಂದ ಹೊರಟ ವಿಕಿರಣಗಳು ಸರಿಸಮನಾದ ಪ್ರಮಾಣದಲ್ಲಿದ್ದಾಗ ಭೂಮಿಯ ಮೇಲಿನ ಸರಾಸರಿ ಉಷ್ಣತೆ - ೬° ಸೆ. ಇರಬೇಕು. ಆದರೆ ಭೂಮಿಯ ಮೇಲೆ ಕಂಡುಬಂದಿರುವ ಸರಾಸರಿ ಉಷ್ಣತೆ ೧೫° ಸೆ. ಈಗ ನಮ್ಮ ಮುಂದೆ ತೋರುವ ಪ್ರಶ್ನೆ ಈ ೨೧° ಸೆ.ನ ವ್ಯತ್ಯಾಸಕ್ಕೆ ಕಾರಣವೇನು? ಎಂಬುದು. ಇದಕ್ಕೆ ಉತ್ತರ ಹಸಿರುಮನೆ ಪರಿಣಾಮ ಎಂದು ಹೇಳಬಹುದಾಗಿದೆ.

ಶೀತ ಪ್ರದೇಶಗಳಲ್ಲಿ ಗಿಡಗಳನ್ನು ಬೆಳೆಸಲು ಗುಡಿಸಲಿನಾಕಾರದ ಆವರಣಗಳನ್ನು ಬಳಸುತ್ತಾರೆ. ಈ ಆವರಣಗಳ ಮೇಲ್ಛಾವಣಿಗಳನ್ನು ಗಾಜು ಅಥವಾ ಪಾರದರ್ಶಕ ಪ್ಲಾಸ್ಟಿಕ್ ಹಾಳೆಯಿಂದ ಮುಚ್ಚಲಾಗುತ್ತದೆ. ಇದಕ್ಕೆ ಹಸಿರು ಮನೆ ಎಂದು ಹೆಸರು. ಸೂರ್ಯನಿಂದ ಪ್ರಸರಿಸಲ್ಪಟ್ಟ ಶಾಖದ ಕಿರಣಗಳು ಗಾಜಿನೊಳಗೆ ಪ್ರವೇಶಿಸಿ, ಗಿಡಗಳು ಹಾಗೂ ಭೂಮಿಯ ಉಷ್ಣತೆಯನ್ನು ಹೆಚ್ಚಿಸುತ್ತವೆ. ಇದರೊಳಗಿನಿಂದ ಹೊರಹೊಮ್ಮುವ ಶಾಖದ ಅಲೆಗಳು ಗಾಜಿನ ಮೂಲಕ ಹೊರ ಹೋಗಲಾರವು. ಇದರಿಂದಾಗಿ ಗಾಜಿನ ಮನೆಯೊಳಗಿನ ವಾತಾವರಣವು ಬೆಚ್ಚಗಿರುತ್ತದೆ. ಇದರಿಂದಾಗಿ, ಗಿಡಗಳು ಬೇಗನೆ ಹೂ ಬಿಡುತ್ತವೆ. ಇದಕ್ಕೆ ಹಸಿರುಮನೆ ಪರಿಣಾಮ ಎಂದು ಹೆಸರು. ೧೮೨೭ರಲ್ಲಿ ಫೋರಿಯರ್ ಎಂಬ ಫ್ರೆಂಚ್ ಭೌತಶಾಸ್ತ್ರಜ್ಞನು ಹಸಿರುಮನೆಯು ಈ ರೀತಿ ಬೆಚ್ಚಗಾಗುವುದನ್ನು ಕಂಡುಹಿಡಿದನು.

ಭೂಮಿಯೂ ಒಂದು ಹಸಿರು ಮನೆಯಂತೆ ವರ್ತಿಸುತ್ತದೆ ಎಂಬುದು ಕುತೂಹಲಕರ ಸಂಗತಿ. ಭೂಮಿಯ ಸುತ್ತಲ ವಾತಾವರಣವು ಹಲವಾರು ಅನಿಲಗಳಿಂದ ಕೂಡಿದೆ. ಸಾರಜನಕ ಮತ್ತು ಆಮ್ಲಜನಕಗಳು ಶಾಖವನ್ನು ಹೀರುವುದಿಲ್ಲ; ಇಂಗಾಲದ ಡೈ ಆಕ್ಸೈಡ್ ಉಷ್ಣವಾಹಕವಲ್ಲ; ಭೂಮಿಯಿಂದ ಹೊರಹೊಮ್ಮಿದ ಶಾಖವನ್ನು ಇಂಗಾಲದ ಡೈ ಆಕ್ಸೈಡ್ ಹೀರಿಕೊಂಡು ಭೂಮಿಯ ಸುತ್ತಲೂ ಬಿಸಿಯಾದ ಹೊದಿಕೆಯನ್ನು ಉಂಟುಮಾಡುತ್ತದೆ. ಭೂಮಿಯ ವಾತಾವರಣದಲ್ಲಿದ್ದು ಶಾಖ ಹೀರುವ ಈ ಕಾರ್ಬನ್ ಡೈ ಆಕ್ಸೈಡ್, ಮೀಥೇನ್, ನೈಟ್ರಸ್ ಆಕ್ಸೈಡ್, ಕ್ಲೋರೋ ಫ್ಲೋರೋ ಕಾರ್ಬನ್ (ಸಿಎಫ್‌ಸಿ) ಮುಂತಾದವುಗಳನ್ನು ಹಸಿರು ಅನಿಲಗಳೆಂದು ಕರೆಯಲಾಗುತ್ತದೆ. ಇವು ಹಸಿರು ಮನೆಯ ಮೇಲ್ಛಾವಣಿಯಂತೆ ವರ್ತಿಸುತ್ತವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ವಾತಾವರಣದಲ್ಲಿ ಕೇವಲ ಸಾರಜನಕ, ಆಮ್ಲಗಳಿದ್ದಾಗ ಭೂ ಉಷ್ಣತೆಯು - ೬° ಸೆ. ಎಂದಿದ್ದುದು ಈಗ ಸುಮಾರ ೨೧° ಸೆ. ಆಗಿದೆ. ಮಾನವನ ಚಟುವಟಿಕೆಗಳಿಂದ ಹಸಿರು ಮನೆ ಅನಿಲಗಳಲ್ಲಿ ಪ್ರಮುಖವಾದ ಇಂಗಾಲದ ಡೈ ಆಕ್ಸೈಡ್ ಅನಿಲವು ಭೂವಾತಾವರಣದಲ್ಲಿ ದಿನೇ ದಿನೇ ಹೆಚ್ಚುತ್ತಿರುವುದು ಇದಕ್ಕೆ ಕಾರಣವಾಗಿದೆ.

ಹೆಚ್ಚುತ್ತಿರುವ ವಾಹನಗಳು ಹಾಗೂ ಮಾನವನು ಅಪಾರ ಪ್ರಮಾಣದಲ್ಲಿ ಉರಿಸುವ ಇಂಧನಗಳಿಂದ ಶೇ. ೩೦ರಷ್ಟು ಹೆಚ್ಚಿರುವ ಇಂಗಾಲದ ಡೈ ಆಕ್ಸೈಡ್ ಅನಿಲ ಮುಂದಿನ ೧೦೦ ವರ್ಷಗಳಲ್ಲಿ ಈಗಿನ ಪ್ರಮಾಣಕ್ಕಿಂತ ದ್ವಿಗುಣವಾಗುತ್ತದೆ ಎಂದು ತಿಳಿದುಬಂದಿದೆ. ಈಗಾಗಲೇ ಇಂಗಾಲದ ಡೈ ಆಕ್ಸೈಡ್ ಹೆಚ್ಚಳವು ಹಸಿರುಮನೆ ಪರಿಣಾಮವನ್ನು ಶೇ. ೭೦ರಷ್ಟು ಹೆಚ್ಚಿಸಿದೆ. ಅದೇ ರೀತಿ ಮೀಥೇನ್ ಅನಿಲ ಹಾಗೂ ನೈಟ್ರಸ್ ಆಕ್ಸೈಡ್‌ಗಳು ಈ ಪರಿಣಾಮವನ್ನು ಕ್ರಮವಾಗಿ ಶೇ. ೨೪ ಹಾಗೂ ಶೇ. ೬ರಷ್ಟು ಹೆಚ್ಚಿಸಿವೆ. ಒಟ್ಟಾರೆ ಹೇಳಬೇಕಾದಲ್ಲಿ ಮೇಲಿನ ಎಲ್ಲ ಕಾರಣಗಳಿಂದ, ಭೂಮಿಯ ಉಷ್ಣತೆಯು ಶತಮಾನಕ್ಕೆ ೨.೫° ಸೆ. ನಂತೆ ಹೆಚ್ಚಾಗಿರುವುದೆಂದು ಅಂದಾಜಿಸಲಾಗಿದೆ. ದಿನ ಹಾಗೂ ರಾತ್ರಿಯ ಉಷ್ಣತೆಯ ವ್ಯತ್ಯಾಸಕ್ಕೆ ಹೋಲಿಸಿದರೆ ಇದು ಹೆಚ್ಚೆಂದು ತೋರುವುದಿಲ್ಲ; ಆದರೆ ವಿಶ್ವದ ಸರಾಸರಿ ಉಷ್ಣತೆಯನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದೇವೆ ಎಂಬುದನ್ನು ಗಮನಿಸಿದರೆ ಕಳೆದ ಹತ್ತು ಸಾವಿರ ವರ್ಷಗಳಲ್ಲಿ ವಾರ್ಷಿಕ ಉಷ್ಣತೆಯ ಬದಲಾವಣೆ ವೇಗವು ದಿನದಿನಕ್ಕೆ ಏರುತ್ತಾ ಹೋಗುತ್ತಿದೆ ಎಂಬುದು ಸ್ಪಷ್ಟ. ಅಲ್ಲದೆ ವಾತಾವರಣದಲ್ಲಿರುವ ಇಂಗಾಲದ ಡೈ ಆಕ್ಸೈಡ್ ಅಣುವಿಗೆ ಹೋಲಿಸಿದರೆ ಸಿಎಫ್‌ಸಿ ಅಣುವಿನ ಹಸಿರುಮನೆ ಪರಿಣಾಮವು ೫ ರಿಂದ ೧೦ ಸಾವಿರದಷ್ಟು ಹೆಚ್ಚಾಗಿದೆ. ಆದ್ದರಿಂದ ಅತಿ ಕಡಿಮೆ ಸಾಂದ್ರತೆಯಲ್ಲಿದ್ದರೂ ಸಿಎಫ್‌ಸಿ ಅತ್ಯಂತ ಅಪಾಯಕಾರಿ ಅನಿಲ.

### *ಜಾಗತಿಕ ಉಷ್ಣತೆಯ ಪರಿಣಾಮ*

ಕಾಡಿನ ನಾಶ, ಇಂಧನ ಉರಿಸುವಿಕೆ, ಜನಸಂಖ್ಯಾಸ್ಫೋಟ ಈ ಎಲ್ಲವೂ ಜಾಗತಿಕ ಉಷ್ಣತೆಗೆ ಕಾರಣಗಳು. ಇವುಗಳು ವಾತಾವರಣದ ಇಂಗಾಲದ ಡೈ ಆಕ್ಸೈಡ್‌ನ ಪರಿಮಾಣವನ್ನು ಹೆಚ್ಚಿಸುತ್ತವೆ. ಇದರಿಂದ ಭೂಮಿಯ ಸರಾಸರಿ ಉಷ್ಣತೆಯು ಹೆಚ್ಚುತ್ತದೆ. ಪರಿಣಾಮವಾಗಿ ಈ ನೂತನ ಶತಮಾನದಲ್ಲಿ ಸಮುದ್ರ-ಸಾಗರಗಳ ಮಟ್ಟವೂ ಹೆಚ್ಚುತ್ತದೆ. ನೀರಿನ ಹಿಗ್ಗುವಿಕೆ ಹಾಗೂ ಮಂಜು ಕರಗುವಿಕೆ ಇದಕ್ಕೆ ಕಾರಣವೆನ್ನಬಹುದು. ಇತ್ತೀಚಿಗೆ ಉತ್ಪತ್ತಿಯಾಗುತ್ತಿರುವ ಹಸಿರು ಮನೆ ಅನಿಲಗಳಿಂದ ೨೦೩೦ರ ಹೊತ್ತಿಗೆ ಸಾಗರಗಳ ಸರಾಸರಿ ಮಟ್ಟ ೧೨ ಸೆಂ.ಮೀ.ನಷ್ಟು ಹೆಚ್ಚಬಹುದೆಂದೂ, ೨೧೦೦ರ ಹೊತ್ತಿಗೆ ಅದು ೫೦ ಸೆಂ.ಮೀಟರಿನಷ್ಟು ಏರಿರಬಹುದೆಂದೂ ಲೆಕ್ಕಾಚಾರ ಮಾಡಲಾಗಿದೆ. ಇದರಿಂದಾಗಿಯೇ ಬಾಂಗ್ಲಾದೇಶ ಮತ್ತು ಅಂತಹ ಹಲವಾರು





ಸಮುದ್ರ ತೀರದ ಭೂ ಪ್ರದೇಶಗಳು ಮುಳುಗುವ ಹಂತ ತಲುಪುತ್ತಿವೆ. ಯುರೋಪಿನ ನೆದರ್‌ಲ್ಯಾಂಡ್ಸ್ ಮತ್ತು ಫೆಸಿಫಿಕ್ ಸಾಗರದ ಹಲವಾರು ಕೆಳಮಟ್ಟದ ದ್ವೀಪಗಳೂ ಇಂತಹ ಅಪಾಯದ ಅಂಚಿನಲ್ಲಿವೆ.

ಹೆಚ್ಚುತ್ತಿರುವ ಜನರ ಬೇಡಿಕೆಗಳು, ಉನ್ನತ ಮಟ್ಟದ ಜೀವನ ಶೈಲಿ ಇತ್ಯಾದಿಗಳ ಕಾರಣದಿಂದ ಶುದ್ಧ ನೀರಿನ ಅವಶ್ಯಕತೆಯು ಹೆಚ್ಚುತ್ತಾ ಬಂದಿದೆ. ೫೦ ವರ್ಷಗಳಿಂದೀಚೆಗೆ ಜನರು ಬಳಸುವ ನೀರಿನ ಪ್ರಮಾಣವೂ ನಾಲ್ಕೂ ಪಾಲು ಹೆಚ್ಚಿದೆ. ವಿಶ್ವದಲ್ಲಿ ದೊರಕುವ ಶುದ್ಧ ನೀರನ್ನು ಹಂಚಿಕೊಳ್ಳುತ್ತಿರುವುದೂ ಒಂದು ಸಮಸ್ಯೆಯಾಗಿದೆ. ಆದ್ದರಿಂದಲೇ ಮುಂದೆ ನಡೆಯುವ ಯುದ್ಧಗಳು ರಾಜಕೀಯ ಅಥವಾ ತೈಲಕ್ಕಾಗಿ ಅಲ್ಲದೆ ನೀರಿಗಾಗಿ ಎಂದರೆ ಆಶ್ಚರ್ಯಪಡಬೇಕಿಲ್ಲ. ಜಾಗತಿಕ ಉಷ್ಣತೆ ಇಂತಹ ಬಳಕೆಯ ಶುದ್ಧ ನೀರಿನ ಪ್ರಮಾಣವನ್ನು ಕಡಿಮೆ ಮಾಡುತ್ತದೆ ಏಕೆಂದರೆ ಉಷ್ಣತೆ ಹೆಚ್ಚಾದಂತೆ ಭೂಮಿಯ ಮೇಲೆ ಸುರಿಯುವ ನೀರಿನ ಹೆಚ್ಚಿನ ಪ್ರಮಾಣವು ಆವಿಯಾಗುತ್ತದೆ. ಕಾರ್ಬನ್ ಡೈ ಆಕ್ಸೈಡ್ ಪ್ರಮಾಣದ ಹೆಚ್ಚಳದಿಂದಾಗಿ ಮಳೆ ಕಡಿಮೆಯಾಗುತ್ತದೆ. ಹೆಚ್ಚು ನೀರು ಆವಿಯಾಗುವಿಕೆ ಮತ್ತು ಕಡಿಮೆ ಮಳೆ ಬೀಳುವ ಒಟ್ಟಾರೆ ಪರಿಣಾಮದಿಂದ ನೀರಿನ ಅಭಾವ ಉಂಟಾಗುತ್ತದೆ. ಮರುಭೂಮಿ ಹಾಗೂ ಅರೆ ಮರುಭೂಮಿ ಪ್ರದೇಶಗಳಲ್ಲಿ ಮಳೆಯ ಪ್ರಮಾಣ ಮತ್ತಷ್ಟು ಕಡಿಮೆಯಾಗಿ ಭೂಮಿ ಹೆಚ್ಚು ಬರಡಾಗಿ ಬರ ಪ್ರದೇಶಗಳು ಹೆಚ್ಚಾಗುತ್ತವೆ. ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಪ್ರವಾಹಗಳುಂಟಾಗಿ ಹೆಚ್ಚಿನ ಅನಾಹುತಗಳಾಗುತ್ತವೆ.

ವರ್ಷಾದ್ಯಂತ ಬೀಳುವ ಮಳೆ ಮತ್ತು ಉಷ್ಣತೆಯ ಹಂಚಿಕೆ ಆಯಾ ಪ್ರದೇಶದ ಪ್ರಮಾಣವನ್ನು ನಿರ್ಧರಿಸುತ್ತದೆ. ಜಾಗತಿಕ ಉಷ್ಣತೆಯಿಂದ ಈ ಹಂಚಿಕೆಯ ವಿಧಾನವು ಬದಲಾಗುವುದರಿಂದಲೂ, ಇದು ಸಂಕೀರ್ಣ ಸಮಸ್ಯೆಯಾದುದರಿಂದಲೂ ಅಂತಿಮ ಪರಿಣಾಮಗಳನ್ನು ಊಹಿಸುವುದು ಕಷ್ಟವಾಗುತ್ತದೆ. ನೈಸರ್ಗಿಕ ಪರಿಸರ ವ್ಯವಸ್ಥೆಯು ಬದಲಾಗುವುದರಿಂದ ಕಾಡುಗಳ ಹಾಗೂ ಹಲವಾರು ಸಸ್ಯಜೀವಿ ಸಂಕುಲಗಳ ವಿನಾಶಕ್ಕೆ ಕಾರಣವಾಗಬಹುದು. ಹೆಚ್ಚಿದ ಉಷ್ಣತೆಯ ವಾತಾವರಣದಲ್ಲಿ ರೋಗಾಣುಗಳು ಸುಲಭವಾಗಿ ಹರಡುವುದರಿಂದ ಹಳದಿ ಜ್ವರ, ಡೇಂಗೂ ಜ್ವರ ಮುಂತಾದವುಗಳು ಮುಂಬರುವ ದಿನಗಳಲ್ಲಿ ಜನತೆಯ ಮೇಲೆ ಮಾರಕ ಪರಿಣಾಮಗಳನ್ನು ಉಂಟುಮಾಡಬಹುದು. ಕೊನೆಗಂತೂ ಜಾಗತಿಕ ಉಷ್ಣತೆಯು ಮನುಷ್ಯನ ಜೀವನಕ್ಕೆ ಕಂಟಕಪ್ರಾಯ.

### *ಓಜೋನ್ ಕುಳಿ ಎಂದರೇನು?*

ಭೂಮಿಗೆ ಜೀವರಕ್ಷೆಯನ್ನು ನೀಡುತ್ತಿರುವ ವಾತಾವರಣ ಗೋಳದಲ್ಲಿ ಆಮ್ಲಜನಕ, ಓಜೋನ್, ಇಂಗಾಲದ ಡೈ ಆಕ್ಸೈಡ್, ಸಾರಜನಕ, ನೀರಿನ ಆವಿ ಮುಂತಾದ ಪ್ರಮುಖ ವಸ್ತುಗಳಿರುತ್ತವೆ. ಸೂರ್ಯನಿಂದ ಬರುವ ವಿಕಿರಣಗಳಲ್ಲಿ ಬಹಳ ಅಪಾಯಕಾರಿಯಾದಂತಹ ನೇರಳಾತೀತ ವಿಕಿರಣಗಳು ಆಕಾಶದಲ್ಲೇ ತಡೆಹಿಡಿಯಲ್ಪಡುತ್ತದೆ. ಇದನ್ನು ತಡೆಹಿಡಿಯುವ ಪದರವೇ ಓಜೋನ್ ಪದರ. ಈ ಪದರವು ಅನೇಕ ರೋಗಗಳು ತಾಕದಂತೆ ನಮ್ಮನ್ನು ರಕ್ಷಿಸುತ್ತದೆ. ಆದರೆ ಪ್ರಕೃತಿ ನಿರ್ಮಿತ ಈ ರಕ್ಷಣಾ ಕವಚವನ್ನು ನಾವೇ ನಾಶಗೊಳಿಸುತ್ತಿರುವುದು ದುಃಖಕರ ಸಂಗತಿ.

ನಾವು ತಿಳಿದಿರುವಂತೆ ಆಮ್ಲಜನಕದಲ್ಲಿ ಎರಡು ಪರಮಾಣುಗಳಿವೆ. ಆದರೆ ಮೂರು ಪರಮಾಣುಗಳು ಸೇರಿದಾಗ ಉಂಟಾಗುವ ಅಣುವೇ ಓಜೋನ್. ವಾತಾವರಣದ ಅತಿ ಕೆಳಗಿನ ಪದರವಾದ ಟ್ರೋಪೋಸ್ಫಿಯರ್ ಹಾಗೂ ಭೂಮಿಯಿಂದ ೧೫ ರಿಂದ ೫೦ ಕಿ.ಮೀ. ದೂರದಲ್ಲಿರುವ ಅದರ ಮೇಲಿನ ಪದರವಾದ ಸ್ಟ್ರಾಟೋಸ್ಫಿಯರ್ ಎರಡರಲ್ಲೂ ಹರಡಿಕೊಂಡಿರುವ ಓಜೋನ್ ಪದರ ಭೂಮಿಯ ಸುತ್ತಲೂ ಹಬ್ಬಿದೆ. ಸೂರ್ಯನ ವಿಕಿರಣಗಳು ಆಮ್ಲಜನಕ ಅಣುಗಳನ್ನು ಒಡೆದಾಗ ಆಮ್ಲಜನಕದ ಪರಮಾಣುಗಳು ಸ್ವತಂತ್ರವಾಗುತ್ತವೆ. ಈ ಪರಮಾಣುಗಳು ಮತ್ತೆ ಆಮ್ಲಜನಕದ ಒಂದು ಅಣುವಿನೊಡನೆ ಸೇರಿ ಓಜೋನ್ ಉಂಟಾಗುತ್ತದೆ. ಆದರೆ ರಾಸಾಯನಿಕ ಕ್ರಿಯೆಗಳಿಂದ ಈ ಓಜೋನ್ ಪುನಃ ಆಮ್ಲಜನಕದ ಅಣುವಾಗಿ ಪರಿವರ್ತನೆಯಾಗುವ ಅವಕಾಶಗಳು ಇವೆ. ಈ ರೀತಿಯ ಪರಿವರ್ತನೆಗೆ ಕಾರಣವಾಗುವ ವಸ್ತುಗಳಿಗೆ ಓಜೋನ್ ಕ್ಷೀಣಕ ವಸ್ತುಗಳು ಎಂದು ಹೆಸರು. ಹೀಗೆ ಓಜೋನ್ ಉತ್ಪಾದನೆ ಹಾಗೂ ಓಜೋನ್ ಬದಲಾವಣೆ ಕ್ರಿಯೆಗಳು ತಕ್ಕಡಿಯ ಭಾಗಗಳು ಮೇಲೆ ಕೆಳಗೆ ಹೋಗುವಂತೆ ಸೂಕ್ಷ್ಮವಾಗಿವೆ.

ಮಾನವನು ತಯಾರಿಸಿರುವ ಕ್ಲೋರಿನ್, ಫ್ಲೋರಿನ್ ಅಥವಾ ಬ್ರೋಮಿನ್‌ಗಳನ್ನು ಹೊಂದಿರುವ ಕೃತಕ ವಸ್ತುಗಳು ಓಜೋನ್ ಕ್ಷೀಣಕ ವಸ್ತುಗಳಲ್ಲಿ ಸೇರಿವೆ. ಇದರಲ್ಲಿನ ಮುಖ್ಯವಾದ ವಸ್ತುವಿನ ಒಂದು ಗುಂಪು ಫ್ಲೋರಿನ್ ಹಾಗೂ ಕ್ಲೋರಿನ್‌ಗಳನ್ನು ಹೊಂದಿರುವ ಕ್ಲೋರೋ ಫ್ಲೋರೋ ಕಾರ್ಬನ್‌ಗಳು. ಇವುಗಳನ್ನು ರೆಫ್ರಿಜರೇಟರ್ ಮುಂತಾದ ಶೀತಕಾರಕ ಹಾಗೂ ಏರ್ ಕಂಡೀಶನರ್‌ಗಳಲ್ಲಿ ತಂಪುಕಾರಕ ವಸ್ತುಗಳಾಗಿ ಉಪಯೋಗಿಸುತ್ತಾರೆ. ಜೊತೆಗೆ ಹಾಸಿಗೆ, ಮೆತ್ತೆಗಳಲ್ಲಿ ಉಪಯೋಗವಾಗುವ ಫೋಮ್‌ಗಳ ತಯಾರಿಕೆಗಳಲ್ಲೂ ಓಜೋನ್ ಕ್ಷೀಣಕ ವಸ್ತುಗಳು ಸಹಾಯಕವಾಗಿವೆ. ಮೀಥೈಲ್ ಕ್ಲೋರೋಫಾರಂ ಹಾಗೂ ಮೀಥೈಲ್ ಬ್ರೋಮೈಡ್‌ಗಳು ಇತರ ಓಜೋನ್ ಕ್ಷೀಣಕ ವಸ್ತುಗಳು. ಗಣಕಗಳು ಹಾಗೂ ದೂರವಾಣಿ ಉಪಕರಣಗಳಲ್ಲಿ ಬಳಸುವ ಮುದ್ರಿತ ಮಂಡಲಗಳ ಶುದ್ಧೀಕರಣಕ್ಕೂ ಈ ವಸ್ತುಗಳನ್ನು ಬಳಸಲಾಗುತ್ತದೆ.

### ಓಜೋನ್ ಕ್ಷೀಣಕ ವಸ್ತುಗಳು ಓಜೋನ್ ಪದರವನ್ನು ಹೇಗೆ ನಾಶಗೊಳಿಸುತ್ತವೆ?

ಓಜೋನ್ ಕ್ಷೀಣಕ ವಸ್ತುಗಳನ್ನು ಬಳಸುವ ಉಪಕರಣಗಳು, ಯಂತ್ರಗಳು ಮುಂತಾದವನ್ನು ಶುದ್ಧೀಕರಿಸುವ ಸಂದರ್ಭಗಳಲ್ಲಿ ಕ್ಲೋರೋ ಫ್ಲೋರೋ ಕಾರ್ಬನ್‌ಗಳು ಮತ್ತು ಹಲೋನುಗಳು ವಾತಾವರಣಕ್ಕೆ ಬಿಡುಗಡೆಯಾಗುತ್ತವೆ. ನಂತರ ಮಾನವನ ಕಾರ್ಯ ಚಟುವಟಿಕೆಗಳಿಂದಾಗಿ ಇವುಗಳು ವಾತಾವರಣವನ್ನು ತಲುಪುತ್ತವೆ. ಸ್ಟ್ರಾಟೋಸ್ಫಿಯರನ್ನು ತಲುಪಿದ ಈ ಅನಿಲಗಳು ಮತ್ತು ನೇರಳಾತೀತ (ಅಲ್ಟ್ರಾ ವಯಲೆಟ್, UV) ಕಿರಣಗಳ ನಡುವೆ ಪ್ರತಿಕ್ರಿಯೆಗಳುಂಟಾಗಿ, ಹೆಚ್ಚು ಪ್ರತಿಕ್ರಿಯಾ ಶಕ್ತಿಯನ್ನು ಹೊಂದಿರುವ ಕ್ಲೋರಿನ್, ಬ್ರೋಮಿನ್‌ಗಳನ್ನು ಬಿಡುಗಡೆ ಮಾಡುತ್ತವೆ. ಬಿಡುಗಡೆಯಾದ ಇವು ಓಜೋನ್ ಜೊತೆ ಪ್ರತಿಕ್ರಿಯೆ ನಡೆಸಿ ಅದನ್ನು ಆಮ್ಲಜನಕದ ಅಣುಗಳನ್ನಾಗಿ ಮಾರ್ಪಡಿಸುತ್ತದೆ. ಹೀಗೆ ವಾತಾವರಣದಲ್ಲಿ ಓಜೋನ್ ಪ್ರಮಾಣ ಕಡಿಮೆಯಾಗಿ ಓಜೋನ್ ಕುಳಿ ಉಂಟಾಗುತ್ತದೆ.

ಓಜೋನ್ ಪದರದ ನಾಶ ೧೯೮೬ರಲ್ಲೇ ಕಂಡುಬಂತು. ಮುಂದೆ ೧೯೯೬ರಲ್ಲಿ ಧ್ರುವ ಪ್ರದೇಶಗಳಲ್ಲಿ ಶೇ. ೪೫ರಷ್ಟು ಓಜೋನ್ ನಾಶದ ವಿಷಯ ತಿಳಿದು ಬಂತು. ಈ ಪ್ರದೇಶಗಳ ವಾತಾವರಣದಲ್ಲಿ ಶಾಶ್ವತವಾದ ಧೃವ ಸುರುಳಿಗಳಿರುವುದು ಕಂಡು ಬಂದಿರುವುದು ಒಂದು ಮುಖ್ಯವಾದ ಸಂಗತಿ. ಚಳಿಗಾಲದಲ್ಲಿ ಬಿರುಸಾಗಿ ಸುತ್ತುವರೆದ ಈ ಸುಳಿಗಳಲ್ಲಿ ಓಜೋನ್ ಕ್ಷೀಣಕ ವಸ್ತುಗಳು ಸೇರಿಕೊಂಡಿವುದನ್ನು ಗುರುತಿಸಲಾಯಿತು. ಈ ಸುಳಿಗಳ ಮತ್ತು ಚಲನೆಯ ಪರಿಣಾಮವಾಗಿ ಒಳಗಿನ ಅನಿಲಗಳ ನಡುವೆ ರಾಸಾಯನಿಕ ಪ್ರಕ್ರಿಯೆಗಳು ನಡೆದು, ಓಜೋನ್ ಪದರದ ನಾಶಕ್ಕೆ ದಾರಿ ಮಾಡಿಕೊಡುತ್ತವೆ.

### ಓಜೋನ್ ಪದರದ ನಾಶದ ಪರಿಣಾಮ

ಓಜೋನ್ ಪದರದ ನಾಶದಿಂದ ಸೂರ್ಯನ ವಿಕಿರಣದಲ್ಲಿರುವ ಅಪಾಯಕಾರಿಯಾದ ನೇರಳಾತೀತ ವಿಕಿರಣಗಳು ಭೂಮಿಯನ್ನು ತಲುಪುತ್ತವೆ. ಈ ವಿಕಿರಣಗಳನ್ನು UV-A, UV-B ಮತ್ತು UV-C ಎಂದು ಮೂರು ವಿಧವಾಗಿ ವಿಂಗಡಿಸಬಹುದು. UV-A ವಿಕಿರಣಗಳು ಗಾಳಿ ಮೂಲಕ ವಾತಾವರಣವನ್ನು ಪ್ರವೇಶಿಸಿದರೆ, UV-C ವಿಕಿರಣಗಳನ್ನು ಓಜೋನ್ ಹಾಗೂ ಆಮ್ಲಜನಕಗಳು ಸಂಪೂರ್ಣವಾಗಿ ತಡೆಗಟ್ಟುತ್ತವೆ. ಓಜೋನ್‌ನಿಂದ ಅತಿ ಹೆಚ್ಚು ಪ್ರಮಾಣದಲ್ಲಿ ಹೀರಲ್ಪಟ್ಟ ನಂತರ ಉಳಿದ ಅತ್ಯಲ್ಪ UV-B ವಿಕಿರಣಗಳು ಭೂಮಿ ಸೇರುತ್ತವೆ. ಓಜೋನ್ ಪದರಗಳು ತೆಳುವಾದಂತೆ ಹೆಚ್ಚು ಹೆಚ್ಚು ವಿಕಿರಣಗಳು ಭೂಮಿಯನ್ನು ತಲುಪಿ ಚರ್ಮದ ಕ್ಯಾನ್ಸರ್, ಕಣ್ಣಿನ ಪೊರೆ ಮುಂತಾದ ರೋಗಗಳನ್ನು ಉಂಟುಮಾಡುತ್ತವೆ. ಗಿಡಗಳು ಹಾಗೂ ಜಲಚರ ಪ್ರಾಣಿಗಳ ಪ್ರಜನನ ಕ್ರಿಯೆಗಳಿಗೂ ಈ ನೇರಳಾತೀತ ವಿಕಿರಣಗಳು ಅಪಾಯಕಾರಿಯಾಗಿವೆ.

ಆದ್ದರಿಂದ ಜಾಗತಿಕ ಉಷ್ಣತೆ ಹಾಗೂ ಓಜೋನ್ ಪದರದ ನಾಶ ಇವೆರಡೂ ಒಂದಕ್ಕೊಂದು ಪೂರಕವಾದ ಸಮಸ್ಯೆಗಳು ಇವೆರಡನ್ನೂ ಬಗೆಹರಿಸುವುದು ಇಂದಿನ ನಮ್ಮ ಮುಖ್ಯ ಕೆಲಸವಾಗಿದೆ. ಇದರಲ್ಲಿ ನಾವು ಮಾಡಬೇಕಾದ ಮೊದಲ ಕೆಲಸ ಇಂಗಾಲದ ಡೈ ಆಕ್ಸೈಡ್‌ನ ಉತ್ಪತ್ತಿಯನ್ನು ಕಡಿಮೆ ಮಾಡುವುದು. ಅದೇ ರೀತಿ ಕ್ಲೋರೋ ಫ್ಲೋರೋ ಕಾರ್ಬನ್‌ಗಳ ಬಳಕೆಯೂ ಕಡಿಮೆಯಾಗಬೇಕು. ಒಂದು ದೇಶದಲ್ಲಿ ಆಗುವ ಮಾಲಿನ್ಯ ಇಡೀ ಜಗತ್ತನ್ನೇ ನಾಶದ ಕಡೆಗೆ ಕರೆದೊಯ್ಯಬಹುದು. ಈ ಕಾರಣದಿಂದ ಜಾಗತಿಕ ಉಷ್ಣತೆ ಹಾಗೂ ಓಜೋನ್ ಪದರಗಳ ಸಮಸ್ಯೆಗಳಿಗೆ ಜಾಗತಿಕವಾಗಿಯೇ ಉತ್ತರಗಳನ್ನು ಹುಡುಕುವುದು ಅವಶ್ಯಕ.

ರಯೋಡಿನಜನೈರೋದಲ್ಲಿ ೧೯೯೨ ಜೂನ್‌ನಲ್ಲಿ ನಡೆದ ಪರಿಸರ ಹಾಗೂ ಅಭಿವೃದ್ಧಿ ಸಮ್ಮೇಳನದಲ್ಲಿ ೧೬೦ ದೇಶಗಳು ಭಾಗವಹಿಸಿದ್ದವು. ಹೆಚ್ಚಿರುವ ಹಸಿರುಮನೆ ಅನಿಲಗಳನ್ನು ಕಡಿಮೆ ಮಾಡಿ, ಒಂದು ಸಮತೋಲನದಲ್ಲಿಡುವುದು ಈ ಸಮ್ಮೇಳನದ ಗುರಿಯಾಗಿತ್ತು. ಇದೇ ರೀತಿಯ ಸಮ್ಮೇಳನಗಳು ೧೯೯೫, ೧೯೯೬ ಮತ್ತು ೧೯೯೭ರಲ್ಲೂ ನಡೆದವು. ಹಸಿರುಮನೆ ಪರಿಣಾಮಕ್ಕೆ ಕಾರಣವಾಗುವ ವಸ್ತುಗಳ ವಿಸರಣವನ್ನು ಕಡಿಮೆಗೊಳಿಸಲು ಈ ಎಲ್ಲ ದೇಶಗಳೂ ಬದ್ಧವಾಗಿರಬೇಕೆಂಬುದೇ ಈ ಸಮ್ಮೇಳನಗಳ ಧ್ಯೇಯವಾಗಿತ್ತು.

ಹವಾಮಾನ ಬದಲಾವಣೆಗಳನ್ನು ನಿಧಾನಗೊಳಿಸಲು ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕು.

★ ಕಾಡಿನ ನಾಶವನ್ನು ಕಡಿಮೆ ಮಾಡುವುದು
★ ಹೆಚ್ಚಿನ ಕಾಡನ್ನು ಬೆಳೆಸುವುದು
★ ಮೀಥೇನ್ ವಿಸರಣಗಳನ್ನು ಕಡಿತಗೊಳಿಸುವುದು
★ ಶಕ್ತಿಮೂಲಗಳ ಉಳಿತಾಯ
★ ಪುನರ್ಬಳಕೆ ಶಕ್ತಿಮೂಲಗಳ ಬಳಕೆ ಹೆಚ್ಚಿಸುವುದು

ಹೀಗೆ ಓಜೋನ್ ಪದರ ರಕ್ಷಣೆಗೆ ಏಕಕಾಲಿಕವಾಗಿ ಹಲವಾರು ಕ್ರಮಗಳನ್ನು ಕೈಗೊಳ್ಳಬೇಕು. ಬಹುಮುಖ್ಯ ಕಾರ್ಯಕ್ರಮವೆಂದರೆ, ಕ್ರಮಕ್ರಮವಾಗಿ ಓಜೋನ್ ಕ್ಷೀಣಕ ವಸ್ತುಗಳ ಬಳಕೆಯನ್ನು ನಿಲ್ಲಿಸಬೇಕು. ಅಂದರೆ ವಿಶ್ವಾದ್ಯಂತ ಕ್ಲೋರೋ ಫ್ಲೋರೋ ಕಾರ್ಬನ್‌ಗಳ ಬಳಕೆಯನ್ನೂ, ಅವುಗಳ ಬಿಡುಗಡೆಯನ್ನು ಕೂಡಲೇ ನಿಲ್ಲಿಸಬೇಕು. ಇದಕ್ಕಾಗಿ ಕ್ಲೋರೋ ಫ್ಲೋರೋ ಕಾರ್ಬನ್‌ಗಳಿಗೆ ಪರ್ಯಾಯವಾದ ಓಜೋನ್‌ಗೆ ಅಪಾಯ ಮಾಡದ ವಸ್ತುಗಳನ್ನು ಬಳಸಬೇಕು. ಇವುಗಳ ದಹ್ಯವಲ್ಲದ, ವಿಷಕಾರಿಯಲ್ಲದ, ಸುಲಭವಾಗಿ ಶೇಖರಿಸಿಡಬಲ್ಲ, ಸುಲಭ ಬೆಲೆಯ ವಸ್ತುಗಳಾಗಬೇಕು.





### ಜಾಗತಿಕ ಮಟ್ಟದ ಪ್ರಯತ್ನಗಳು

೧೯೭೭ರಲ್ಲಿ ೩೦ಕ್ಕೂ ಹೆಚ್ಚಿನ ರಾಷ್ಟ್ರಗಳು ಒಂದಾಗಿ ಸೇರಿ ಓಜೋನ್ ಪದರ ಕುರಿತ ಜಾಗತಿಕ ಕ್ರಿಯಾ ಯೋಜನೆಯೊಂದನ್ನು ಜಾರಿಗೊಳಿಸಲು ನಿರ್ಧರಿಸುವುದರೊಂದಿಗೆ ವಿಶ್ವದ ವಾತಾವರಣ ಕಾಪಾಡುವ ವಿಶ್ವಸಂಸ್ಥೆಯ ಕಾರ್ಯಕ್ರಮಗಳು ಆರಂಭವಾದವು. ೧೯೮೦ರ ವೇಳೆಗೆ ಓಜೋನ್ ಪದರ ರಕ್ಷಣೆಯ ಕಾರ್ಯಗಳಿಗೆ ಕಾನೂನು ರೂಪವನ್ನು ಕೊಡಲಾಯಿತು. ಇದನ್ನು ೧೯೮೫ರಲ್ಲಿ ವಿಯನ್ನಾದಲ್ಲಿ ನಡೆದ ಸಭೆಯಲ್ಲಿ ಅಧಿಕೃತವಾಗಿ ಅಂಗೀಕರಿಸಲಾಯಿತು. ಈ ಅಂಶಗಳನ್ನು ಈಗಾಗಲೇ ೧೬೬ ದೇಶಗಳು ಒಪ್ಪಿ ಸಹಿ ಹಾಕಿವೆ. ಅನೇಕ ಚರ್ಚೆಗಳು ಹಾಗೂ ವಿಚಾರ ವಿನಿಮಯಗಳ ನಂತರ ಓಜೋನ್ ಕ್ಷೀಣಕ ವಸ್ತುಗಳನ್ನು ಕ್ರಮ ಕ್ರಮವಾಗಿ ಹಿಂತೆಗೆದುಕೊಳ್ಳುವ, ಉತ್ಪಾದನೆ ಮಾಡದಿರುವ ನಿಶ್ಚಿತ ಕ್ರಿಯಾ ಯೋಜನೆಗಳು ಅಂತಿಮವಾಗಿ ಸಿದ್ಧಗೊಂಡಿವೆ. ಈ ಕ್ರಿಯಾ ಯೋಜನೆಗಳನ್ನು ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅನುಷ್ಠಾನಗೊಳಿಸಲು ಇರುವ ತಾಂತ್ರಿಕ ಹಾಗೂ ಆರ್ಥಿಕ ಸಾಮರ್ಥ್ಯಗಳನ್ನು ಅವಲಂಬಿಸಿ ಅನುಷ್ಠಾನಗೊಳಿಸಲು ಅವಗಳಿಗೆ ಪ್ರತ್ಯೇಕ ವಿಧಾನಗಳನ್ನು ರೂಪಿಸಲಾಗಿದೆ. ಈ ಕಾರ್ಯಕ್ರಮಗಳ ಯಶಸ್ಸಿಗಾಗಿ ಅಂತಾರಾಷ್ಟ್ರೀಯ ನಿಧಿಯೊಂದನ್ನು ಸ್ಥಾಪಿಸಿ, ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸಹಾಯ ನೀಡಲು ನಿರ್ಧರಿಸಲಾಗಿದೆ. ಮಾಂಟ್ರಿಯಲ್‌ನಲ್ಲಿ ವಿಶ್ವದ ರಾಷ್ಟ್ರಗಳು ಒಪ್ಪಂದಕ್ಕೆ ಸಹಿ ಹಾಕಿದ ಸವಿ ನೆನಪಿಗಾಗಿ ಪ್ರತಿವರ್ಷವೂ ಸೆಪ್ಟೆಂಬರ್ ೧೬ನೆಯ ದಿನಾಂಕವನ್ನು ಓಜೋನ್ ಪದರ ರಕ್ಷಣೆಯ ದಿನವನ್ನಾಗಿ ಆಚರಿಸಲಾಗುತ್ತಿದೆ.

### ಭಾರತದಲ್ಲಿ ...

ಭಾರತವು ವಿಯನ್ನಾ ಸಮ್ಮೇಳನದ ಘೋಷಣೆಗಳನ್ನು ೧೯೯೧ರಲ್ಲೂ, ಮಾಂಟ್ರಿಯಲ್ ಸಮ್ಮೇಳನದ ನಿರ್ಧಾರಗಳನ್ನು ೧೯೯೨ರಲ್ಲೂ ಅಂಗೀಕರಿಸಿದೆ. ಓಜೋನ್ ಪದರ ರಕ್ಷಣೆ ಸಂಬಂಧಿಸಿದ ಜಾಗೃತಿ ಕಾರ್ಯಕ್ರಮಗಳು, ಓಜೋನ್ ಕ್ಷೀಣಕ ವಸ್ತುಗಳ ಬಳಕೆಯನ್ನು ಕ್ರಮಕ್ರಮವಾಗಿ ನಿಲ್ಲಿಸುವ, ಈ ಕಾರ್ಯಕ್ರಮಗಳಿಗಾಗಿ ಸಿದ್ಧಗೊಂಡಿರುವ ಕ್ರಿಯಾಯೋಜನೆಗಳ ಜಾರಿ ಹಾಗೂ ಉಸ್ತುವಾರಿ ಮುಂತಾದ ಹಲವಾರು ಕಾರ್ಯಕ್ರಮ ಗಳನ್ನು ನಿಭಾಯಿಸಲು ಭಾರತ ಸರಕಾರದ ಪರಿಸರ ಮತ್ತು ಅರಣ್ಯ ಸಚಿವಾಲಯದಲ್ಲಿ ಒಂದು ಓಜೋನ್ ಕೋಶವನ್ನು ಸ್ಥಾಪಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ಕೈಗಾರಿಕೆಗಳು ಮತ್ತು ಸಂಶೋಧನಾ ಸಂಸ್ಥೆಗಳು ಒಟ್ಟಿಗೆ ಸೇರಿ ಓಜೋನ್ ಪದರ ಉಳಿಸಲು ಅನುವಾಗುವಂತೆ ವಿಶೇಷ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತಿದೆ. ಕ್ಲೋರೋ ಫ್ಲೋರೋ ಕಾರ್ಬನ್ ಬದಲಾಗಿ ಹೈಡ್ರೋ ಕಾರ್ಬನ್ ವಸ್ತುಗಳನ್ನು ತಂಪುಕಾರಕ ಉಪಕರಣಗಳ ತಯಾರಿಕಾ ಸಂಸ್ಥೆಗಳು ಬಳಸುವಂತೆ ಪ್ರಚುರಪಡಿಸುವ ಪರಿಸರ ಸ್ನೇಹಿ ಕಾರ್ಯಕ್ರಮವನ್ನು ದೆಹಲಿಯ ಐಐಟಿ, ಪುಣೆ ನಗರದಲ್ಲಿರುವ ರಾಷ್ಟ್ರೀಯ ರಾಸಾಯನಿಕ ಪ್ರಯೋಗಶಾಲೆ ಹಾಗೂ ಟಾಟಾ ಶಕ್ತಿ ಸಂಶೋಧನಾ ಸಂಸ್ಥೆಗಳು ಕೈಗೊಂಡಿವೆ. ಸ್ಥಳೀಯವಾಗಿಯೇ ಪರ್ಯಾಯ ವಸ್ತುಗಳನ್ನು ತಯಾರಿಸುವ ತಂತ್ರಜ್ಞಾನನ್ನು ಅಭಿವೃದ್ಧಿಪಡಿಸುವತ್ತ ಗಮನವನ್ನು ಕೇಂದ್ರೀಕರಿಸಲಾಗಿದೆ. ಕ್ಲೋರೋ ಫ್ಲೋರೋ ಕಾರ್ಬನ್‌ಗೆ ಪರ್ಯಾಯವಾದ ಎಚ್‌ಎಫ್‌ಸಿ ೧೩೪ ವಸ್ತುವನ್ನು ಹೈದರಾಬಾದಿನ ಐಐಸಿಟಿ (ಭಾರತೀಯ ರಾಸಾಯನಿಕ ತಂತ್ರಜ್ಞಾನ ಸಂಸ್ಥೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಕೆಮಿಕಲ್ ಟೆಕ್ನಾಲಜಿ) ಸಂಸ್ಥೆಯು ತಯಾರಿಸಿ ಒಂದು ಪ್ರಮುಖ ಸಾಧನೆಯನ್ನು ಮಾಡಿದೆ. ಈಗಾಗಲೇ ತಯಾರಾಗಿರುವ ೬೨೦೦ ಟನ್ ಓಜೋನ್ ಕ್ಷೀಣಕ ವಸ್ತುಗಳನ್ನು ನಿಷ್ಕ್ರಿಯಗೊಳಿಸುವ ಯೋಜನೆಗಾಗಿ ೫೦ ದಶಲಕ್ಷ ಡಾಲರುಗಳ ಸಹಾಯಧನ ಭಾರತಕ್ಕೆ ದೊರೆಯಲಿದೆ.

### ವೈಯಕ್ತಿಯ ಪ್ರಯತ್ನಗಳು

ನಾವೆಲ್ಲರೂ ನಮ್ಮ ಪರಿಸರವನ್ನು ಕಾಪಾಡಿಕೊಳ್ಳುವ ಅಗತ್ಯವನ್ನು ಮನದಟ್ಟುಮಾಡಿಕೊಳ್ಳಬೇಕು. ಓಜೋನ್ ಕ್ಷೀಣಕ ವಸ್ತುಗಳ ಬಳಕೆಯನ್ನು ಕಡಿಮೆ ಮಾಡಿದಷ್ಟೂ ಪರಿಸರ ಶುದ್ಧವಾಗಿರುತ್ತದೆ. ಓಜೋನ್ ಪದರದ ರಕ್ಷಣೆಯ ಮಹತ್ವದ ಬಗ್ಗೆ ನಾವು ಪ್ರಚಾರ ಮಾಡಬೇಕು. ನಾವು ಕೊಳ್ಳುವ ಉಪಕರಣಗಳಲ್ಲಿ ಓಜೋನ್ ಕ್ಷೀಣಕ ವಸ್ತುಗಳಿಲ್ಲವೆಂದು ಖಾತರಿಪಡಿಸಿಕೊಳ್ಳಬೇಕು. ಓಜೋನ್ ಕ್ಷೀಣಕ ವಸ್ತುಗಳಿಗೆ ಪರ್ಯಾಯಗಳಿವೆ. ಆದರೆ ಓಜೋನ್ ಪದರಕ್ಕೆ ಬೇರೆ ಪರ್ಯಾಯವೇ ಇಲ್ಲ ಎಂಬುದನ್ನು ನಾವು ಗಮನದಲ್ಲಿಟ್ಟುಕೊಂಡಿರಬೇಕು.

*(ಕೃಪೆ : ಕಣಾದ ಬೆಳ್ಳಿ ಸಂಚಿಕೆ)* ★

### ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರುಗಳ ಗಮನಕ್ಕೆ

ಸನ್ಮಾನ್ಯರೇ,

ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ನಾವು ಮಾಡಿಕೊಂಡ ಮನವಿಗೆ ಸ್ಪಂದಿಸಿದ ಹಲವಾರು ಮಂದಿ ಆಜೀವ ಸದಸ್ಯರು ೧,೦೦೦ ರೂ.ಗಳಿಗೆ ಸರಿಹೊಂದುವಂತೆ ಉಳಿಕೆ ಹಣವನ್ನು ಕಳುಹಿಸಿ ಕೊಟ್ಟಿರುತ್ತಾರೆ. ಅವರಿಗೆ ನಮ್ಮ ಧನ್ಯವಾದಗಳು. ದಯಮಾಡಿ ಬಾಕಿ ಇರುವ ಎಲ್ಲಾ ಸದಸ್ಯರುಗಳು ಉಳಿಕೆ ಹಣವನ್ನು ಕಳುಹಿಸಿ ಕೊಟ್ಟು ಸಹಕಾರ ನೀಡಿ ಪತ್ರಿಕೆಯ ಪ್ರಗತಿಗೆ ಕಾರಣರಾಗಬೇಕೆಂದು ವಿನಮ್ರಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು



# ಪರಿಸರ ಆರೋಗ್ಯ

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು,
ಬೆಂಗಳೂರು. ದೂರವಾಣಿ (ಮನೆ) 23354435

ನಮ್ಮ ಆರೋಗ್ಯ ಪರಿಸ್ಥಿತಿಯು ಅನೇಕ ಅಂಶಗಳ ಮೇಲೆ ಅವಲಂಬಿಸಿರುತ್ತದೆ. ತಂದೆ ತಾಯಿಗಳಿಂದ ಬಳುವಳಿಯಾಗಿ ಪಡೆದ ಅನುವಂಶಿಕ ಅಂಶಗಳು, ವಯಸ್ಸು, ಲಿಂಗ, ಸಾಮಾಜಿಕ ಆರ್ಥಿಕ ಪರಿಸ್ಥಿತಿ, ಪರಿಸರ ಇತ್ಯಾದಿ. ಪರಿಸರ ಭೌತಿಕ ಪರಿಸರ, ಸಾಮಾಜಿಕ ಪರಸರ ಹಾಗೂ ಜೈವಿಕ ಪರಿಸರ ಎಂದು ವಿಂಗಡಿಸಬಹುದು. ಭೌತಿಕ ಪರಿಸರ ಎಂದರೆ ನಾವು ಸೇವಿಸುವ ಗಾಳಿ, ಕುಡಿಯುವ ನೀರು, ವಾಸಿಸುವ ಮನೆ, ಶಬ್ದ, ಬೆಳಕು, ಇವೆಲ್ಲವೂ ಸೇರಿರುತ್ತದೆ. ನಾವು ಸೇವಿಸುವ ಗಾಳಿ ಮಲಿನಗೊಂಡರೆ ಶ್ವಾಸಕೋಶಗಳ ತೊಂದರೆ ಉಂಟಾಗುತ್ತದೆ. ಲಕ್ಷಗಟ್ಟಲೆ ವಾಹನಗಳು ಹಾಗೂ ಕಾರ್ಖಾನೆಗಳು ಅನೇಕ ರೀತಿಯ ವಿಷಾನಿಲಗಳನ್ನು ಗಾಳಿಗೆ ಹೊರಹಾಕುತ್ತಿವೆ. ಇದನ್ನು ಸೇವಿಸಿದ ಜನರಿಗೆ ಅಲ್ಪಕಾಲ ಹಾಗೂ ದೀರ್ಘಕಾಲದ ಕೆಮ್ಮು, ಉಬ್ಬಸ ಉಂಟಾಗುತ್ತಿದೆ. ಗಾಳಿಯನ್ನು ಶುದ್ಧಗೊಳಿಸಲು ಮರಗಿಡಗಳು ಪ್ರಮುಖ ಪಾತ್ರವಹಿಸುತ್ತವೆ. ಆದರೆ ಅರಣ್ಯ ನಾಶದಿಂದ ಇದು ಸಾಧ್ಯವಾಗುತ್ತಿಲ್ಲ. ಕೆಲವು ಕಾರ್ಖಾನೆಗೆ ಅತ್ಯಂತ ತೀಕ್ಷ್ಣವಾದ ವಿಶಾನಿಲಗಳನ್ನು ನೇರವಾಗಿ ಗಾಳಿಗೆ ಹೊರಹಾಕುವುದರಿಂದ ಜನರಲ್ಲಿ ಶ್ವಾಸಕೋಶದ ತೊಂದರೆ ಅಲ್ಲದೆ ಕ್ಯಾನ್ಸರ್ ಉಂಟುಮಾಡುವ ಸಾಧ್ಯತೆ ಹೆಚ್ಚಾಗಿದೆ. ಜೊತೆಗೆ ಇತ್ತೀಚೆಗೆ ಎಲ್ಲರೂ ಯೋಚಿಸುತ್ತಿರುವ, ಚಿಂತೆಗೀಡಾಗುತ್ತಿರುವ ವಿಷಯವೆಂದರೆ ಓಜೋನ್ ಪದರ ಕಡಿಮೆಯಾಗುತ್ತಿರುವುದು ಇದಕ್ಕೆ ವಾಯುಮಾಲಿನ್ಯವು ಒಂದು ಕಾರಣವೆಂದು ತಜ್ಞರ ಅಭಿಪ್ರಾಯ. ಓಜೋನ್ ಪದರ ಕಡಿಮೆಯಾದಲ್ಲಿ ಸೂರ್ಯನ ಪ್ರಖರ ಕಿರಣಗಳು ಜೀವಿಗಳ ಮೇಲೆ ಕೆಟ್ಟ ಪರಿಣಾಮ ಬೀರುವುದೆಂದು ವಿಜ್ಞಾನಿಗಳ ಅಭಿಪ್ರಾಯ. ಇದು ಒಂದು ವಿಷಯವಾದರೆ ಜನದಟ್ಟಣೆಯ ಪ್ರದೇಶಗಳಲ್ಲಿ ಅನೇಕ ಬ್ಯಾಕ್ಟೀರಿಯ ಹಾಗೂ ವೈರಸ್ ರೋಗಗಳು ಮನುಷ್ಯನಿಂದ ಮನುಷ್ಯನಿಗೆ ಕೆಮ್ಮುವಾಗ, ಸೀನುವಾಗ, ಗಟ್ಟಿಯಾಗಿ ಮಾತನಾಡುವಾಗ ಗಾಳಿಯ ಮುಖಾಂತರ ಹರಡುತ್ತಿವೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕ್ಷಯರೋಗ, ಗಂಟಲು ಮಾರಿ, ನಾಯಿಕೆಮ್ಮು, ಫ್ಲೂ, ದಡಾರ, ಗದಕಟ್ಟು ಇತ್ಯಾದಿ. ಎಲ್ಲರೂ ಕೆಮ್ಮುವಾಗ, ಸೀನುವಾಗ ಕರವಸ್ತ್ರದಿಂದ ಬಾಯಿಮುಚ್ಚಿಕೊಳ್ಳಬೇಕು. ಎಲ್ಲೆಂದರಲ್ಲಿ ಉಗುಳಬಾರದು. ಇನ್ನು ಜಲಮಾಲಿನ್ಯ ಅಂದರೆ, ನೀರು ಕಲುಷಿತವಾಗುವುದು. ಅನೇಕ ದೇಶಗಳಿಗೆ ಕಾಲರಾ ರೋಗ ಹರಡಿದ ಕೀರ್ತಿ ನಮ್ಮದು. ಅಂದರೆ ಇಂದಿಗೂ ನಮ್ಮ ದೇಶದಲ್ಲಿ ಜನ ಸಿಕ್ಕ ಸಿಕ್ಕಲ್ಲಿ ಮಲವಿಸರ್ಜನೆ ಮಾಡುತ್ತಾರೆ. ಪಾಯಿಖಾನೆ ಅಥವಾ ಶೌಚಾಲಯ ಉಪಯೋಗಿಸುವುದಿಲ್ಲ. ಕುಡಿಯುವ ನೀರಿಗೆ ಹಾಹಾಕಾರ. ಹಳ್ಳಿಗಳಲ್ಲಿ ಹೊಂಡ, ಕೆರೆ, ನದಿ ನೀರನ್ನು ಕುಡಿಯುತ್ತಾರೆ ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ಮಲವಿಸರ್ಜನೆ ಮಾಡುತ್ತಾರೆ. ಮನುಷ್ಯನ ಮಲದಿಂದ ಕಲುಷಿತವಾದ ನೀರನ್ನು ಕುಡಿಯುವುದರಿಂದ, ಅನೇಕ ರೋಗಗಳು ಮನುಷ್ಯನಿಂದ ಮನುಷ್ಯನಿಗೆ ಹರಡುತ್ತದೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕಾಲರ, ಟೈಫಾಯಿಡ್, ಹಳದಿ ಕಾಮಾಲೆ, ಪೋಲಿಯೊ ರೋಗ, ಆಮಶಂಕೆ ಮುಂತಾದವುಗಳು. ಇದರ ಜೊತೆಗೆ ಅನೇಕ ಕಾರ್ಖಾನೆಗಳು ಕಲುಷಿತ ವಸ್ತುಗಳನ್ನು ನದಿ, ಕೆರೆ, ಸಮುದ್ರಗಳಿಗೆ ಹರಿಸಿಬಿಡುತ್ತಿದ್ದಾರೆ. ಕಾರ್ಖಾನೆಯ ಹೊರವಸ್ತುಗಳನ್ನು ಶುಚಿಗೊಳಿಸುವ ವ್ಯವಸ್ಥೆ ಇರಬೇಕೆಂದು ಕಾನೂನು ಇದೆ. ಆದರೆ ಅನೇಕರು ಪಾಲಿಸುತ್ತಿಲ್ಲ. ವಿಷವಸ್ತುಗಳನ್ನು ನೀರಿನ ನೆಲೆಗಳಿಗೆ ಬಿಡುವುದರಿಂದ ಮೀನು ಮುಂತಾದ ಜಲಚರಗಳು ಸಾಯುತ್ತಿವೆ. ಕಲುಷಿತವಾದ ನೀರನ್ನು ಕುಡಿಯುವ ದನಕರುಗಳು ಹಾಗೂ ಜನರ ಅರೋಗ್ಯದ ಮೇಲೆ ಭೀಕರ ಪರಿಣಾಮ ಉಂಟಾಗುತ್ತಿದೆ.

ಇನ್ನು ಇತರ ಪರಿಸರ ಮಾಲಿನ್ಯದ ಬಗ್ಗೆ ಗಮನ ಹರಿಸೋಣ. ಪಟ್ಟಣ ಪ್ರದೇಶಗಳಲ್ಲಿ ಜನದಟ್ಟಣೆ ಹೆಚ್ಚುತ್ತಿದೆ. ಮನೆಯಿಂದ, ಆಸ್ಪತ್ರೆಗಳಿಂದ, ಕಾರ್ಖಾನೆಗಳಿಂದ ಹೊರಕ್ಕೆ ಹಾಕುತ್ತಿರುವ ಕಸದ ರಾಶಿ ಹೆಚ್ಚುತ್ತಿದೆ. ಆಸ್ಪತ್ರೆಗಳಿಂದ ಹೊರಹಾಕುವ ತ್ಯಾಜ್ಯ ವಸ್ತುಗಳಲ್ಲಿ ಅಪಾಯಕಾರಿ ವಸ್ತುಗಳಿದ್ದು ಅದು ಇತರ ಕಸದ ಜತೆ ಸೇರಬಾರದೆಂದು ಕಾನೂನು ಜಾರಿಯಲ್ಲಿದೆ. ಕಸ ಅದರಲ್ಲೂ ಇತ್ತೀಚೆಗೆ ಪ್ಲಾಸ್ಟಿಕ್ ವಸ್ತುಗಳನ್ನು ಸಿಕ್ಕ ಸಿಕ್ಕಲ್ಲಿ ಬಿಸಾಡಬಾರದು. ಕಸ ಹೆಚ್ಚಾಗಿ ಸೇರಿ ಕೊಳೆತು ಕೆಟ್ಟ ವಾಸನೆ ಬೀರುವುದಷ್ಟೇ ಅಲ್ಲದೆ ನೊಣ ವಂಶಾಭಿವೃದ್ಧಿ ಮಾಡಲು ಅವಕಾಶ ಉಂಟಾಗುತ್ತದೆ. ಇವು ಇಲಿ, ಹೆಗ್ಗಣ, ನಾಯಿ ಹಂದಿ ಮುಂತಾದ ಪ್ರಾಣಿಗಳನ್ನು ಆಕರ್ಷಿಸುತ್ತದೆ. ಕಸದ ಸೂಕ್ತ ವಿಲೇವಾರಿ ಬಹಳ ಮುಖ್ಯವಾದುದು.

ಇತ್ತೀಚೆಗೆ ಶಬ್ದಮಾಲಿನ್ಯದ ಬಗ್ಗೆ ಜನ ಆತಂಕಗೊಂಡಿದ್ದಾರೆ. ಯಾವುದೇ ಸಮಾರಂಭವಾದರೆ ಬೀದಿ ಪೂರ್ತಿಯಾಗಿ ಕೇಳುವಂತೆ ಲೌಡ್ ಸ್ಪೀಕರ್ ಹಾಕುವುದು, ಕಾರ್ಖಾನೆಗಳಲ್ಲಿ ಶಬ್ದ, ವಾಹನಗಳು ಹಾರನ್ ಶಬ್ದ ಇವುಗಳಿಂದ ಶಬ್ದಮಾಲಿನ್ಯ ಹೆಚ್ಚಾಗುತ್ತಿದೆ. ಮಕ್ಕಳ, ವೃದ್ಧರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತಿದೆ. ಕೋಪ, ತಾಪ, ಅಶಾಂತಿ, ರಕ್ತದ ಒತ್ತಡ ಹೆಚ್ಚಾಗುವುದು, ಮಾನಸಿಕ ಒತ್ತಡ ಈ ಸಮಸ್ಯೆಗಳಿಂದ ಶಬ್ದಮಾಲಿನ್ಯ ಕಾರಣವೆಂದು ಹೇಳಲಾಗುತ್ತಿದೆ. ಇದೇ ರೀತಿಯಲ್ಲಿ ಸಾಮಾಜಿಕ ಪರಿಸರ ಎಂದರೆ ಮನುಷ್ಯನ ಜೀವನದ ರೀತಿ, ಸಣ್ಣ ಪುಟ್ಟ ವಿಷಯಗಳಿಗೆ ದ್ವೇಷ, ಅಸೂಯೆ ಕೊನೆಗೆ ಕೊಲೆ ಮಾಡಲು ಸಹ ಹಿಂದೇಟು ಹಾಕದಂತಹ ಪರಿಸ್ಥಿತಿ ಉಂಟಾಗುತ್ತಿದೆ. ಸಾಮಾಜಿಕ ಆರ್ಥಿಕ ಅಭಿವೃದ್ಧಿ, ಸಾಂಸ್ಕೃತಿಕ ಚಟುವಟಿಕೆಗಳು, ಸಂಗೀತ, ಕ್ರೀಡೆ ಮುಂತಾದ ಚಟುವಟಿಕೆಗಳು ಯೋಗ, ಆಧ್ಯಾತ್ಮಿಕ ವಿಷಯಗಳು ಪ್ರಸಾರದಿಂದ ಸಾಮಾಜಿಕ ಪರಿಸರ ತಿಳಿಗೊಳ್ಳುವುದರಲ್ಲಿ ಸಂದೇಹವಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಮನುಷ್ಯನ ಶತ್ರು ಮನುಷ್ಯ. ಇದನ್ನು ತಿಳಿದು ಪರಿಸರ ಹಾಗೂ ಆರೋಗ್ಯ ವಿಷಯಗಳ ಬಗ್ಗೆ ಎಲ್ಲರೂ ಗಮನ ಹರಿಸಬೇಕು.

★







# ಬಹು ಉಪಯೋಗಿ ಬೆಳ್ಳುಳ್ಳಿ

– ಶಿವಣ್ಣ
ಹುಲ್ಲೂರು – 584138.
ಉದ್ಬಾಳ ಅಂಚೆ, ಸಿಂಧನೂರು ತಾಲ್ಲೂಕು,
ರಾಯಚೂರು ಜಿಲ್ಲೆ.

ಅನಾದಿ ಕಾಲದಿಂದಲೂ ಪ್ರತಿ ಮನೆಯಲ್ಲಿಯೂ ಪ್ರತಿ ದಿನವೂ ಬಳಕೆಯಲ್ಲಿರುವ ವಸ್ತು ಬೆಳ್ಳುಳ್ಳಿ. ಇದು ರೋಗಗಳನ್ನು ಗುಣಪಡಿಸುವಲ್ಲಿ ಅದ್ಭುತ ಗುಣಗಳನ್ನು ಹೊಂದಿದೆ. ಇದರ ನಿತ್ಯ ಸೇವನೆಯಿಂದ ಆರೋಗ್ಯವೂ, ಶಕ್ತಿಯೂ ವೃದ್ಧಿಸುತ್ತದೆ. ಕರುಳಿನ ದೋಷಗಳನ್ನು ನಿವಾರಿಸುವಲ್ಲಿ ಇದರ ಪಾತ್ರ ಹಿರಿದು. ಇದರಲ್ಲಿ ಕೆಮ್ಮು, ದಮ್ಮು, ಜ್ವರ, ಕಿವುಡುತನ, ಶ್ವಾಸನಾಳದ ತೊಂದರೆ ಗಳನ್ನು ನಿವಾರಿಸುವ ಶಕ್ತಿ ಇದರಲ್ಲಿ ಅಡಗಿದೆ. ಮೂತ್ರದೋಷವನ್ನು ನಿವಾರಿಸುತ್ತದೆ. ರಕ್ತದ ಒತ್ತಡವನ್ನು ಹತೋಟಿಯಲ್ಲಿಡುತ್ತದೆ. ಇದರಲ್ಲಿ ಗಂಧಕಾಂಶ ಹೆಚ್ಚಾಗಿರುವುದರಿಂದ ರಕ್ತದೋಷಗಳನ್ನು ನಿವಾರಿಸುತ್ತದೆ. ಹೃದ್ರೋಗ, ಕ್ಷಯ, ಕ್ಯಾನ್ಸರ್, ಜಠರದ ತೊಂದರೆಗಳಲ್ಲಿ ಲೇಪನ, ಸೇವನೆ, ಮಾಲೆಗಳ ರೂಪದಲ್ಲಿ ಬಳಸುತ್ತಾರೆ. ಇದರಲ್ಲಿರುವ ಎಲೀಸ್ ಸಲ್ಫಾಯಿಡ್ ಶರೀರ ದಲ್ಲಿರುವ ಆಮ್ಲಜನಕದೊಡನೆ ಸೇರಿ ಸಲ್ಫ್ಯೂರಿಕ್ ಆಸಿಡ್ ಉತ್ಪತ್ತಿಯಾಗಿ ಶ್ವಾಸಕೋಶ ಚರ್ಮ, ಮೂತ್ರಪಿಂಡ, ಯಕೃತ್ ಮೂಲಕ ಹೊರಬೀಳುತ್ತದೆ. ಶರೀರದ ಅತಿಸೂಕ್ಷ್ಮ ಅವಯವ ಗಳಿಗೆ ಶೀಘ್ರವಾಗಿ ವ್ಯಾಪಿಸುತ್ತದೆ.

ಬೆಳ್ಳುಳ್ಳಿಯಲ್ಲಿಯ ಉಗ್ರವಾಸನೆಯು ಬೇಗ ಹಬೆಯಾಗುವ ಸಂಯುಕ್ತ ಪದಾರ್ಥಗಳು ವ್ಯಾಧಿಗಳನ್ನು ಗುಣಪಡಿಸುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಈ ಗಂಧಕಯುಕ್ತ ಪದಾರ್ಥಗಳು ಬೆಳ್ಳುಳ್ಳಿಯಲ್ಲಿ ಬಹಳಷ್ಟು ಪ್ರಮಾಣದಲ್ಲಿ ಇವೆ. ಜೀವ ಹೀರುವ ಅನೇಕ ಕಾಯಿಲೆಗಳ ವಿರುದ್ಧ ಈ ಗಂಧಕ ಸಂಯುಕ್ತ ಪದಾರ್ಥಗಳು ಶಕ್ತಿಯುತವಾಗಿ ಹೋರಾಡಬಲ್ಲವು. ಬೇರೆ ಬೇರೆ ರೀತಿಯಲ್ಲಿ ಹೃದ್ರೋಗದ ಜೊತೆಗೆ ಯಶಸ್ವಿಯಾಗಿ ಹೋರಾಡುವ ಪ್ರಚಂಡ ಬಲ ಇದರಲ್ಲಿದೆ. ಇದು ರಕ್ತನಾಳದಲ್ಲಿ ರಕ್ತ ಹೆಪ್ಪುಗಟ್ಟುವುದನ್ನು ತಡೆಯುತ್ತದೆ. ಮತ್ತು ಕೊಲಸ್ಟ್ರಾಲ್ ವಿರುದ್ಧ ಪರಿಣಾಮಕಾರಿ ಯಾಗಿ ಹೋರಾಡುತ್ತದೆ. ಪೋಷಕಾಂಶಗಳ ದೃಷ್ಟಿಯಿಂದ ನೋಡಿದರೆ ಬೆಳ್ಳುಳ್ಳಿಯದೆ ಅಗ್ರಸ್ಥಾನ. ಇದು ಎ, ಬಿ, ಸಿ, ಜೀವಸತ್ವದ ಆಗರವೆ ಇದಾಗಿದೆ. ಇದು ಶರೀರದ ಅನೇಕ ಸೋಂಕು ರೋಗದಿಂದ ರಕ್ಷಿಸುವುದಕ್ಕೆ ಪ್ರಚೋದನೆ ನೀಡುತ್ತದೆ. ಹಸಿ ಬೆಳ್ಳುಳ್ಳಿಯ ರಸವು ಬ್ಯಾಕ್ಟಿರಿಯಾ ರೋಗ ಜಂತುಗಳನ್ನು ನಾಶಪಡಿಸುತ್ತದೆ.

ಅದನ್ನು ಬೇಯಿಸಿ, ಅಥವಾ ಬೆಂಕಿಯಲ್ಲಿ ಸುಟ್ಟು ಸೇವಿಸಿದರೆ ಅಧಿಕವಾದ ರಕ್ತ ಒತ್ತಡವನ್ನು ಹತೋಟಿಯಲ್ಲಿ ಇಡಲು ಸಹಕರಿಸುತ್ತದೆ. ಬೆಳ್ಳುಳ್ಳಿಯನ್ನು ನೀರಿನಲ್ಲಿ ಬೇಯಿಸಿ ಆ ದ್ರಾವಣದಿಂದ ಗಾಯಗಳನ್ನು ತೊಳೆಯುವುದರಿಂದ ರೋಗಾಣು ಜೀವಿಗಳು ನಾಶಹೊಂದುವವು. ಕ್ಷಯ ರೋಗಿಗಳು ರೋಗ ಮುಕ್ತವಾದ ಮೇಲೆ ಎರಡು ವರ್ಷಗಳ ಕಾಲ ಪ್ರತಿ ದಿನವು ಬೆಳ್ಳುಳ್ಳಿಯನ್ನು ಬಳಸುತ್ತಿದ್ದರೆ ರೋಗ ಮರುಕಳಿಸುವುದಿಲ್ಲ. ಬೆಳ್ಳುಳ್ಳಿ, ಹೊಂಗೆ ಬೀಜ ಮತ್ತು ಅಡಿಗೆ ಉಪ್ಪು ನುಣ್ಣಗೆ ಅರಿದು ಗಾಯಗಳಿಗೆ ಹಚ್ಚಿ ಕಟ್ಟಿದರೆ ಬೇಗನೆ ಗಾಯ ಮಾಯುವುದು. ಕೊಳೆತು ನಾರುವ ಹುಣ್ಣಿಗೆ ಬೆಳ್ಳುಳ್ಳಿ ಮತ್ತು ಬೆಣ್ಣೆ ನುಣ್ಣಗೆ ಅರೆದು ಹಚ್ಚಿದರೆ ಹುಣ್ಣು ಬೇಗನೆ ತುಂಬಿಬರುವುದು. ಬೆಳ್ಳುಳ್ಳಿಯ ಒಂದು ತೊಳೆಯನ್ನು ಚೆನ್ನಾಗಿ ಮಸೆದು ಚೇಳು ಕಡಿದ ಜಾಗಕ್ಕೆ ಹಚ್ಚಿದರೆ ಶೀಘ್ರ ಗುಣ ಕಂಡು ಬರುವುದು.

ಒಂದು ಟೀ ಚಮಚ ಬೆಳ್ಳುಳ್ಳಿ ರಸ ಅಷ್ಟೇ ಪ್ರಮಾಣದ ಜೇನು ತುಪ್ಪದೊಂದಿಗೆ ಮಿಶ್ರಮಾಡಿ ಸೇವಿಸುವುದರಿಂದ ಹೊಟ್ಟೆಯಲ್ಲಿರುವ ಜಂತು ಹುಳುಗಳು ಮಲದ ಮೂಲಕ ಹೊರ ಬೀಳುವವು. ಮುಟ್ಟಿನ ದೋಷದಿಂದ ಗರ್ಭಾಶಯದಲ್ಲಿ ನೋವು ಕಾಣಿಸಿಕೊಂಡರೆ ಬೆಳ್ಳುಳ್ಳಿಯನ್ನು ಒಂದು ಬಟ್ಟಲು ನೀರಿನಲ್ಲಿ ಚೆನ್ನಾಗಿ ಬೇಯಿಸಿ ನೀರನ್ನು ದಿನಕ್ಕೆ ಮೂರು ಬಾರಿ ಕುಡಿಯುವುದರಿಂದ ನೋವು ನಿವಾರಣೆಯಾಗುವುದು. ಬೆಳ್ಳುಳ್ಳಿ ದೇಹಕ್ಕೆ ಒಳ್ಳೆ ಶಕ್ತಿಯನ್ನು ನೀಡುವಲ್ಲಿ ಸಮರ್ಥವಾಗಿದೆ. ಇದು ಹಸಿವನ್ನು ಹೆಚ್ಚಿಸುತ್ತದೆ. ಸ್ವರವನ್ನು ಸರಿಪಡಿಸುತ್ತದೆ. ಸೌಂದರ್ಯವರ್ಧಕವಾದಂತೆ ಇದು ವೀರ್ಯವರ್ಧಕವೂ ಹೌದು. ಇದು ಕಣ್ಣು ಮತ್ತು ಕೂದಲಿಗೆ ಹಿತಕಾರಿ. ಕಂಠವರ್ಧಕ, ನಂಜು ನಿವಾರಕವೂ ಆಗಿದೆ. ಕಸ್ತೂರಿಯಂತೆ ಪರಿಣಾಮಕಾರಿ ಯಾಗಿರುವುದರಿಂದ ಇದನ್ನು 'ಬಡವರ ಕಸ್ತೂರಿ' ಎಂದೂ ಕರೆಯುವರು. ರೋಗ ಬಾರದಂತೆ ತಡೆಯುವ ಶಕ್ತಿ, ಬಂದ ನಂತರ ರೋಗಕ್ಕೆ ನೀಡುವುದು ಮುಕ್ತಿ ಅಂಥ ಶಕ್ತಿ ಈ ಬೆಳ್ಳುಳ್ಳಿ ಹೊಂದಿದೆ.

ಷಡ್ರಸಗಳ ಪೈಕಿ ಬೆಳ್ಳುಳ್ಳಿಯಲ್ಲಿ ಐದು ರಸಗಳಿವೆ. ಒಂದು ರಸವು ಕಡಿಮೆ ಇರುವುದರಿಂದ ಇದಕ್ಕೆ 'ರಸೋನ' (ಒಂದು ರಸ ಊನ) ಎಂಬ ಹೆಸರು ಬಂದಿದೆ. ಇದರ ಬೇರಿನಲ್ಲಿ ಖಾರ ರಸವು, ದಂಟಿನಲ್ಲಿ ಕಹಿರಸವು, ನಾಳದಲ್ಲಿ ಒಗರು ರಸವು, ನಾಳದ ಅಗ್ರಭಾಗದಲ್ಲಿ ಲವಣ ರಸವೂ ಬೀಜದಲ್ಲಿ ಮಧುರ ರಸವು ಇದೆ. ಇದನ್ನು ಮಕ್ಕಳಿಗೆ ಆಹಾರದ ಜೊತೆ ಸೇವಿಸಲು ಕೊಟ್ಟರೆ ಪೋಲಿಯೋ ರೋಗದಿಂದ ಮುಕ್ತರಾಗಬಹುದು ಎನ್ನುತ್ತಾರೆ. ಪಾರ್ಶ್ವವಾಯುವಿಗೆ ನಾಲ್ಕು ತೊಲ ಬೆಳ್ಳುಳ್ಳಿಯನ್ನು ಅರೆದು ಅದರಲ್ಲಿ ಸೈಂಧಲವಣ, ಕರಿಉಪ್ಪು, ಜೀರಿಗೆ, ಶುಂಠಿ, ಮೆಣಸು, ಹಿಪ್ಲಿ ಲವಂಗ, ಹುರಿದ ಹಿಂಗು ಇವುಗಳನ್ನು ಕಾಲು ತೊಲ ಪ್ರಮಾಣ ಸೇರಿಸಿ ಚಿಕ್ಕ ಬಾರೆಕಾಯಿ ಗಾತ್ರದ ಗುಳಿಗೆ ಮಾಡಿ ಪ್ರಾತಃಕಾಲ ಹಾಗೂ ಸಾಯಂಕಾಲಗಳಲ್ಲಿ ಒಂದೊಂದು ಗುಳಿಗೆ ನುಂಗಿ ಹರಳು ಬೇರಿನ ಕಷಾಯ

ಕುಡಿದರೆ ಕೀಲುವಾಯು, ಲಕ್ವ ನಿವಾರಣೆಯಾಗುತ್ತದೆ. ಬೆಳ್ಳುಳ್ಳಿಯನ್ನು ನುಣ್ಣಗೆ ಅರೆದು ತುಪ್ಪದೊಡನೆ ಸೇವಿಸಿದರೆ ಸಮಸ್ತ ವಾತ ರೋಗಗಳು ಗುಣವಾಗುತ್ತವೆ. ವಾಯು ಪ್ರಕೋಪ, ಜಠರ ದೋಷಗಳು ನಿವಾರಣೆಯಾಗುವವು. ಬೆಳ್ಳುಳ್ಳಿಯನ್ನು ಬೆಲ್ಲದೊಂದಿಗೆ ಜಜ್ಜಿ ಒಂದು ಕಡಲೆಕಾಳಿನಷ್ಟು ರಾತ್ರಿ ಮಲಗುವ ಮುನ್ನ ನುಂಗಿ ನೀರು ಕುಡಿಯುವುದರಿಂದ ಮುಟ್ಟಿನ ದೋಷಗಳು ನಿವಾರಣೆಯಾಗುವುದು.

ಬೆಳ್ಳುಳ್ಳಿ ಒಂದೆಲಗದ ಸೊಪ್ಪು, ಸೈಂಧಲವಣ, ಚಿತ್ರ ಮೂಲದ ಬೇರು. ಇವುಗಳನ್ನು ಒಂದೆಲಗದ ಸೊಪ್ಪಿನ ರಸ ಮತ್ತು ಚಿತ್ರಮೂಲದ ರಸದಲ್ಲಿ ಅರೆದು ಲೇಪಿಸಿದರೆ ಕೂದಲು ಹುಟ್ಟುತ್ತವೆ. ನೂರು ಗ್ರಾಂ ಬೆಳ್ಳುಳ್ಳಿಯನ್ನು ಸಿಪ್ಪೆ ಸುಲಿದು ನುಣ್ಣಗೆ ಜಜ್ಜಿ ಅರ್ಧ ಲೀಟರ್ ಹಾಲಿನಲ್ಲಿ ಕುದಿಸಿ ಗಟ್ಟಿಯಾದಾಗ ಇಳಿಸಿಕೊಂಡು ಅವರೆಕಾಳಿನ ಗಾತ್ರದ ಮಾತ್ರೆಗಳನ್ನು ಮಾಡಿಟ್ಟು ಕೊಂಡು ಪ್ರತಿದಿನ ಬೆಳಗ್ಗೆ ಒಂದು ಅಥವಾ ಎರಡು ಮಾತ್ರೆಗಳನ್ನು ಬಿಸಿ ನೀರಿನೊಂದಿಗೆ ಕನಿಷ್ಠ ಒಂದು ತಿಂಗಳು ಸೇವಿಸಿದರೆ ದೇಹದ ಕೊಬ್ಬು ಕರಗುವುದು. ದೇಹದ ತೂಕ ಇಳಿದು ಹಗುರಾಗುವುದು. ರಕ್ತದೊತ್ತಡ ಗುಣವಾಗುವುದು. ಕಣ್ಣಿನದೃಷ್ಟಿ ಉತ್ತಮಗೊಳ್ಳುವುದು. ನರಗಳ ದೌರ್ಬಲ್ಯ ನೀಗುವುದು. ಮಲಬದ್ಧತೆ ನಿವಾರಣೆಯಾಗುವುದು. ಮುಟ್ಟು ಬರುವುದಕ್ಕಿಂತ ಒಂದು ವಾರ ಹಿಂದಿನ ದಿನಗಳಲ್ಲಿ ಬೆಳಗ್ಗೆ ಎರಡು ಬೆಳ್ಳುಳ್ಳಿ ತೊಳೆಗೆ ಅದರ ಇಮ್ಮಡಿಗೆ ಬೆಲ್ಲ ಸೇರಿಸಿ ಅರಿದು ನುಂಗಿ ಅರ್ಧ ಬಟ್ಟಲು ಹಾಲು ಕುಡಿಯುವುದರಿಂದ ಮುಟ್ಟಿನ ಕಾಲದಲ್ಲಿ ಬರುವ ಸೊಂಟ ನೋವು, ಹೊಟ್ಟೆಶೂಲೆ, ಮುಟ್ಟುಹೊಟ್ಟೆ ನೋವು ನಿವಾರಣೆಯಾಗುತ್ತದೆ.

ಸಿಪ್ಪೆ ತೆಗೆದ ಬೆಳ್ಳುಳ್ಳಿಯನ್ನು ಚೆನ್ನಾಗಿ ಅರೆದು ಎಳ್ಳೆಣ್ಣೆಯಲ್ಲಿ ಬೆರೆಸಿ ಕುದಿಸಿ ಊತ ನೋವುಗಳಿದ್ದ ಜಾಗಕ್ಕೆ ಲೇಪನ ಮಾಡಿ ಮಸಾಜ್ ಮಾಡಬೇಕು. ೩ ಗಂಟೆಗಳ ನಂತರ ಬಿಸಿ ನೀರಿನಿಂದ ತೊಳೆದುಕೊಳ್ಳಬೇಕು. ಇದರಿಂದ ಸಂದಿವಾತ, ಸೊಂಟ, ಬೆನ್ನು ನೋವುಗಳು ಊತಗಳು ಶಮನವಾಗುವವು. ಬೆಳ್ಳುಳ್ಳಿ ಒಂದು ತೊಲ ಕರಿಎಳ್ಳು ಎರಡು ತೊಲ ಇವೆರಡನ್ನು ಕೂಡಿಸಿ ಸೂರ್ಯೋದಯಕ್ಕೆ ಮುಂಚೆ ೨೧ ದಿನಗಳವರೆಗೆ ಸೇವಿಸುವುದರಿಂದ ಮೂರ್ಛೆರೋಗ ಗುಣವಾಗುತ್ತದೆ. ಬೆಳ್ಳುಳ್ಳಿ ಅರೆದು ರಸ ತೆಗೆದು ಒಂದು ಟೀ ಚಮಚ ಬಿಸಿ ನೀರು ಬೆರೆಸಿ ದಿನಕ್ಕೆರಡು ಬಾರಿಯಂತೆ ಮೂರು ತಿಂಗಳು ಸೇವಿಸಿದರೆ ಅಸ್ತಮಾ ಗುಣವಾಗುವುದು. ಬೆಳಗ್ಗೆ ಮತ್ತು ರಾತ್ರಿ ಅರ್ಧ ಚಮಚ ಬೆಳ್ಳುಳ್ಳಿರಸ ಒಂದು ಚಮಚ ಜೇನು, ಅರ್ಧ ಚಮಚ ಶೀತಾಫಲಾದಿ ಚೂರ್ಣ ಸೇರಿಸಿ ಸೇವಿಸಲು ಉಬ್ಬಸ ಮತ್ತು ಉಸಿರುಗಟ್ಟುವುದು ನಿವಾರಣೆಯಾಗುತ್ತದೆ. ಇತ್ತೀಚೆಗೆ ಬೆಳ್ಳುಳ್ಳಿ ರಸವನ್ನು ವ್ಯವಸಾಯ ಬದುಕಿನಲ್ಲಿ ಕೀಟನಾಶಕ್ಕಾಗಿ ಬಳಸಲು ಯೋಗ್ಯವೆನಿಸಿದೆ. ಬೆಳ್ಳುಳ್ಳಿ ರಸವು ಹುಳುಗಳ ನಯವಾದ ಚರ್ಮವನ್ನು ಸುಟ್ಟು ಅವುಗಳನ್ನು ಸಾಯಿಸುತ್ತದೆ. ಹೀಗಾಗಿ ಬೆಳ್ಳುಳ್ಳಿ ಕೀಟಗಳ ನಾಶಕವಾಗಿದ್ದು ಕೃಷಿಯಲ್ಲಿಯೂ ತನ್ನ ಪ್ರಭಾವವನ್ನು ಬೀರುವ ಸಾಮರ್ಥ್ಯವನ್ನು ಪಡೆದಿದೆ.

★

## ಸಾಮಾಜಿಕ ಕಾರ್ಯಕರ್ತ ಶ್ರೀ ಗುರುನಂಜಯ್ಯನವರು ನಿಧನ



ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ, ಶರಣ ಸೇವಾ ಸಮಾಜ ಮೊದಲಾದ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಸೇವೆ ಸಲ್ಲಿಸುತ್ತಿದ್ದ ಶ್ರೀ ಗುರುನಂಜಯ್ಯ ಅವರು ೮-೧೨-೨೦೦೪ರ ಮಂಗಳವಾರ ಹೃದಯಾಘಾತದಿಂದ ನಿಧನರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಶ್ರೀ ಗುರುನಂಜಯ್ಯನವರು ಯಾವುದೇ ಕೆಲಸವನ್ನು ವಹಿಸಿಕೊಂಡರು ಶ್ರದ್ಧೆ, ನಿಷ್ಠೆಯಿಂದ ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರ ಭಕ್ತಿ-ಗೌರವ ಹಾಗೂ ಶ್ರೀಮಠದ ಬಗ್ಗೆ ಅಭಿಮಾನ ವಿಟ್ಟುಕೊಂಡಿದ್ದ ಶ್ರೀ ಗುರುನಂಜಯ್ಯ ಅವರ ನಿಧನ ಸಮಾಜಕ್ಕೆ ತುಂಬಲಾರದ ನಷ್ಟ.

ದಯಾಮಯನಾದ ಪರಶಿವನು ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ನೀಡಲೆಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

★







# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

ಭಾಗ-೧೦

*ಶಿವಯೋಗಿಗಳು ಕಗ್ಗೆರೆಯಲ್ಲಿ ಆಚರಿಸಿದ ಶಿವಯೋಗ*

ಶಿವಯೋಗವೆಂದರೆ – ಕರಸ್ಥಲ'ದ ಇಷ್ಟಲಿಂಗದಲ್ಲಿ ಮನಭಾವ ಕರಣೇಂದ್ರಿಯಗಳನ್ನು ಏಕೀಕರಿಸಿಕೊಂಡು ಅನಿಮಿಷೇಕ್ಷಣನಾಗಿ ತಲ್ಲಿಂಗವನ್ನು ನೋಡ ನೋಡುತ್ತಾ ತಾನೆತಾನಾಗಿ ನಿಬ್ಬೆರಗಾಂತು ಶೂನ್ಯಸ್ಥಿತಿಯನ್ನೈದುವುದು' ಎಂದು ಸರಳವಾಗಿ ಲಕ್ಷಣಿಸಬಹುದು.

ಈ ಶಿವಯೋಗದ ಸಾಧನವಾಗಿ ಕರ್ಮಪ್ರಚೋದನೆಗೆ ಕಾರಣವೆನಿಸಿ ಹರಿಯುವ ದಶವಿಧವಾಯುವನ್ನು ಬಂಧ ಮತ್ತು ಮುದ್ರೆ ಎಂಬ ಸಾಧನೆಗಳಿಂದ ಆಕುಂಚನಗೊಳಿಸಿ (ಎಳೆದು ಬಗ್ಗಿಸಿ) ಕುಂಭಿಸಬೇಕು. (ಹಿಡಿದು ನಿಲ್ಲಿಸಬೇಕು) ಅದು ಹೇಗೆಂದರೆ :

ತನು ಮನ ಧನವೇ ಪ್ರಾಣವಾಗಿರುವ ಹರಿವ ಪ್ರಾಣವಾಯುವನ್ನು ಲಿಂಗಧ್ಯಾನದಿಂದ ದೃಢವಾಗಿ ಆಕುಂಚಿಸಿ ಕುಂಡಲಿಯನ್ನು ಮೇಲ್‌ಮುಖವನ್ನಾಗಿಸಿ (ಊರ್ಧ್ವಾಸ್ಯಮಾಡಿ) ಆ ಕುಂಡಲಿನಿಯಲ್ಲಿ ಆ ಪ್ರಾಣವಾಯುವನ್ನು ಕುಂಭಿಸುವುದು. ಇದರಂತೆ ಮಧುರಾಮ್ಲಾದಿಷಡ್ರುಚಿಯತ್ತ ಹರಿಯುವ ಅಪಾನವಾಯುವನ್ನು ಸೆಳೆದು ಶಿವಲಿಂಗರುಚಿಯಿಂದ ಆಕುಂಚಿಸಿ ಮಹಾಲಿಂಗ ಶೇಷದಲ್ಲಿ ಕುಂಭಿಸುವುದು. ಇದಕ್ಕೆ ಮೂಲಾಧಾರಬಂಧ ಎಂದು ಹೆಸರು.

ಉದ್ಯೋಗ ಗಮನದಲ್ಲಿ ಹರಿವ ವ್ಯಾನವಾಯುವನ್ನು ಲಿಂಗದ ನೆನಹಿನಿಂದ ಆಕುಂಚಿಸಿ ಲಿಂಗ ಕ್ರಿಯೆಯಲ್ಲಿ ಕುಂಬಿಸುವುದು. ಧರ್ಮಾದಿ ಚತುರ್ವಿಧ ಪದಂಗಳತ್ತ ಹರಿವ ಉದಾನ ವಾಯುವನ್ನು ಸುಚಿತ್ತದಿಂದ ಆಕುಂಚನಗೈದು ವಿರಾಗತೆಯಲ್ಲಿ (ವೈರಾಗ್ಯ) ಕುಂಭಿಸುವುದು. ಕುಭಾಷೆಯಲ್ಲಿ ಹರಿವ ಸಮಾನ ವಾಯುವನ್ನು ಮಹಾಲಿಂಗ ಧಾರಣಧ್ಯಾನದಿಂದ ಆಕುಂಚಿಸಿ ಸ್ವಯಂ ಜ್ಯೋತಿಸ್ವರೂಪರಾದ ಶರಣರ ಅನುಭಾವದಲ್ಲಿ ಕುಂಭಿಸುವುದು. ಇದಕ್ಕೆ ಒಡ್ಯಾಣಬಂಧವೆಂದು ಹೆಸರು.

ಕುಚಿತ್ತ ಕುಗೋಷ್ಠಿ ಕುಬುದ್ಧಿಯಲ್ಲಿ ಸಂಚರಿಸುವ ನಾಗ ವಾಯುವನ್ನು ಸುಜ್ಞಾನದಿಂದ ಆಕುಂಚಿಸಿ ಶರಣರ ಸದ್ಗೋಷ್ಠಿಯಲ್ಲಿ ಕುಂಭಿಸುವುದು. ದುಷ್ಕರ್ಮ ಮಾರ್ಗದಲ್ಲಿ ಹರಿವ ಕೂರ್ಮ ವಾಯುವನ್ನು ಶಿವಸ್ಮರಣೆಯಿಂದ ಆಕುಂಚಿಸಿ ಷಡಕ್ಷರ ಜಪದಲ್ಲಿ ಕುಂಭಿಸುವುದು. ದುರ್ಗುಣದತ್ತ ಹರಿವ ಕೃಕರ ವಾಯುವನ್ನು ಸದ್ಗುಣ ಧ್ಯಾನದಿಂದ ಆಕುಂಚಿಸಿ ಭಕ್ತರತ್ಯಾಕಲತ ಸುಖದ ಕೂಟದಲ್ಲಿ ಕುಂಭಿಸುವುದು. ಕೋಪದತ್ತ ಹರಿವ ದೇವದತ್ತ ವಾಯುವನ್ನು ಪರಮಶಾಂತಿಯಿಂದ ಆಕುಂಚಿಸಿ ಅನ್ಯಮತವನ್ನು ದಿಕ್ಕರಿಸಿ ಶಿವಶರಣರೇ ಶ್ರೇಷ್ಠರೆಂಬ ನಿಷ್ಠೆಯಲ್ಲಿ ಕುಂಭಿಸುವುದು. ನಾನಾ ರೀತಿ ಕಷ್ಟಪಟ್ಟು ಗಳಿಸಿದ ಅರ್ಥವ ಅಧರ್ಮದಲ್ಲಿ ವ್ಯಯಮಾಡುವ ಭಾವದಲ್ಲಿ ಹರಿವ ಧನಂಜಯ ವಾಯುವನ್ನು ಅನರ್ಪಿತಗೈಯ್ಯುದು ತರವಲ್ಲ ಎಂಬ ಸುಮನದಿಂದ ಆಕುಂಚಿಸಿ, ಅನವರತ ಗುರುಲಿಂಗ ಜಂಗಮಕ್ಕೆ ಮಾಡಿ ನೀಡುವಲ್ಲಿ ಕುಂಭಿಸುವುದು. ಇದಕ್ಕೆ ಜಾಲಂಧರಬಂಧವೆಂದು ಹೆಸರು.

ನಂತರ ತನ್ನ ಕರಸ್ಥಲದಲ್ಲಿನ ದೃಕ್ ಗ್ರಾಹ್ಯವಾದ ಇಷ್ಟಲಿಂಗವನ್ನು ದೃಕ್ಕಿನಿಂದ ಹಿಡಿದು ಶಿರಬಾಗಿ ಚಿತ್ತದಿಂದ ಮೂರ್ಧನ್ಯದಲ್ಲಿ (ಸಹಸ್ರ ದಳವುಳ್ಳ ಬ್ರಹ್ಮರಂಧ್ರದಲ್ಲಿ) ಆಕುಂಚಿಸಿ, ಪ್ರಾಣಮಧ್ಯೇ (ಹೃದಯದ ದಹರಾಕಾಶದಲ್ಲಿ) ಕುಂಭಿಸುವುದು. ಪ್ರಾಣವನ್ನು ಲಿಂಗದ ಮುಖೇನ ರೇಚಿಸುವುದು. ನಂತರ ಆ ಪ್ರಾಣವನ್ನು ಲಿಂಗದ ಮುಖೇನ ಪರವಸ್ತುವಿನಲ್ಲಿ ಪೂರೈಸುವುದು. ಹೀಗೆ ಲಿಂಗಮುಖೇನ ರೇಚಕ ಪೂರಕಮಾಡಿ ದಹಕಾಶದಲ್ಲಿ ಅಥವಾ ೧೨ ದಳಗಳುಳ್ಳ ಅನಾಹುತವೆಂಬ ಲಿಂಗ ಕ್ಷೇತ್ರದಲ್ಲಿ ಕುಂಭಿಸುವುದಕ್ಕೆ ಮಹಾಮುದ್ರೆ ಎಂದು ಹೆಸರು. ನಂತರ ಲಿಂಗವನ್ನು ನಯನಗಳಿಗೆ ಜೋಂಪು ಹತ್ತುವವರೆವಿಗೂ ನೆರೆ ನೋಡಬೇಕು. ನೋಡು ನಯನಗಳಿಂದ ಮೈಮರೆಯದೆ ಜಾಣತನದಿಂದ ನಯನಗಳಿಂದ ಆ ಲಿಂಗವನ್ನು ನೋಡುತ್ತಾ ಮೈಮರೆಯದೆ ಜಾಣತನದಿಂದ ನಯನಗಳಿಂದ ಆ ಲಿಂಗವನ್ನು ತಂದು ಭ್ರೂಮಧ್ಯದಲ್ಲಿ ನಿಲ್ಲಿಸಬೇಕು. ಆಗ ಕಂಗಳೆದುರಿಗೆ (ಜ್ಞಾನ) ಚಿತ್ ಸೂರ್ಯನ ಬೆಳಕಿನ ರಾಶಿ ಕಾಣಿಸುತ್ತದೆ. ಆಗ ಅದನ್ನು ಖೇಚರೀ ಮುದ್ರೆಯಿಂದ ಅಂಗೀಕರಿಸಿ (ಆಕುಂಚಿಸಿ) ಲಿಂಗದಲ್ಲಿ ದೃಷ್ಟಿಯಿಟ್ಟು ಪ್ರಾಣವನ್ನು ಲಿಂಗದಲ್ಲಿ ಕುಂಭಿಸಬೇಕು. ಭ್ರೂಮಧ್ಯೇ (ಹುಬ್ಬುಗಳ ನಡುವೆ) ದೃಷ್ಟಿಯನ್ನು ನಿಲ್ಲಿಸುವುದಕ್ಕೆ ಖೇಚರೀ ಮುದ್ರೆ ಎಂದು ಹೆಸರು. ನಂತರ ಶಾಂಭವೀಮುದ್ರೆಯಿಂದ ತನ್ನ ಹಸ್ತಪೀಠದಲ್ಲಿರುವ ಲಿಂಗವನ್ನು ಷಡಿಂದ್ರಿಯಗಳಲ್ಲಿ ಮುಚ್ಚಿ ಆ ಲಿಂಗದ ದೀಪ್ತಿಯನ್ನು ಪ್ರಾಣದಲ್ಲಿ ಪೂರೈಸಿ ಕುಂಭಿಸುವುದು. ನಾಸಿಕಾಗ್ರದಲ್ಲಿ ದೃಷ್ಟಿಯಿಡುವುದಕ್ಕೆ ಶಾಂಭವೀಮುದ್ರೆ ಎಂದು ಹೆಸರು. ನಂತರ ಷಣ್ಮುಖೀ ಮುದ್ರೆಯನ್ನಾಚರಿಸುವುದು. ಷಣ್ಮುಖೀ ಮುದ್ರೆಯೆಂದರೆ ಮುಖದ ಆರು ರಂಧ್ರಗಳನ್ನು (ಮೂಗಿನ ೨ ರಂಧ್ರ + ೨ ಕಿವಿ ರಂಧ್ರ + ೨ ನೇತ್ರ ರಂಧ್ರ) ಆರು ಬೆರಳುಗಳಿಂದ (೨ ಹೆಬ್ಬೆರಳು + ೨ ತೋರ ಬೆರಳು + ೨ ಮಧ್ಯ ಬೆರಳು) ಮುಚ್ಚಿಕೊಂಡು ನಾಸಾಪುಟದಿಂದ ಪ್ರಾಣವಾಯುವನ್ನು ಪೂರೈಸಿ ಅಧಃ ಕುಂಡಲಿನೀ ಸ್ಥಲದ

ತ್ರಿಕೋಣಕಾರವುಳ್ಳ ಮೂಲಾಧಾರದಲ್ಲಿರುವ ಅಪಾನವಾಯುವನ್ನು ಆಕುಂಚನಗೊಳಿಸುವುದು. ರಂಧ್ರಗಳನ್ನು ಮುಚ್ಚುವ ಈ ಮುದ್ರೆಯಿಂದ ಚಿತ್ತವು ಭ್ರಮರ, ಶಂಖ, ಮೃದಂಗ, ತಾಳ, ಘಂಟೆ, ವೀಣಾ, ಭೇರಿ, ದುಂದುಭಿ, ಸಮುದ್ರಘೋಷ, ಮೇಘಘೋಷವೆಂಬ ದಶವಿಧ ನಾದಗಳಲ್ಲಿ ಲೀನವಾಗುತ್ತದೆ. ನಂತರ ನ-ಮ-ಶಿ-ವಾ-ಯ; ಅಉಮ; (ಬಸವ) ನಾದಬಿಂದು ಎಂಬ ದಶವಿಧ ಬಿಂದುಗಳ ಸಾಕ್ಷಾತ್ಕಾರವಾಗುತ್ತದೆ. ಹೀಗೆ ಷಣ್ಮುಖೀ ಮುದ್ರೆಯನ್ನು ಎಸಗಿ, ಪರಶಿವನು ತಾನೇ ತನ್ನ ಲೀಲೆಯಿಂದ ಬಿಂದು ನಾದ ಕಲೆಯಾಗಿ ಷಡ್ವಿಧಲಿಂಗವಾಗಿ ಷಡ್ವಿಧ ಅಂಗವಾಗಿ ಉಪಾಸ್ಯ ಉಪಾಸಕ ಭೇದದಿಂದ ತೋರುವನೆಂದು ತಿಳಿದು ಷಡ್ವಿಧಭಕ್ತಿಯಿಂದ ಇಷ್ಟಲಿಂಗವನ್ನು ಧ್ಯಾನಿಸಬೇಕು. ಹೀಗೆ ಸಾಧಕಯೋಗಿಯಾದವನು ಬಂಧ-ಮುದ್ರೆಗಳನ್ನು ನಿರ್ವರ್ತಿಸಿ ಗುರುಕರದೊಳುದಿಸಿ ವಿಧಿ (ಬ್ರಹ್ಮ) ಗ್ರಂಥಿಯನ್ನೂ ಭಕ್ತರ ಸಂಸರ್ಗ ಸ್ಥಿತಿಯಿಂದ ಹರಿ (ವಿಷ್ಣು) ಗ್ರಂಥಿಯನ್ನೂ, ಘನಲಿಂಗದೊಳು ಲೀನತೆಯಿಂದ ರುದ್ರಗ್ರಂಥಿಯನ್ನೂ ಕತ್ತರಿಸುತ್ತಾ ಇಂದ್ರಿಯ ಸಮೂಹವನ್ನು ತಿರಸ್ಕರಿಸಿ ಗೆದ್ದು ಮಾಯೆಗೊಳಗಾಗದೇ ಜಾಗ್ರತನಾಗಿರುವುದು. ನಂತರ ಆ ಪರಶಿವನ ಶಕ್ತಿ (ಕಲೆ)ಯೇ ಲಿಂಗವೆಂದರಿದು ತಾನೇ ಅಂಗವೆಂದು ಭಾವಿಸಿ ಈ ಇಬ್ಬರ ಸುಕೂಟವೇ ಲಿಂಗಾಂಗ ಸಂಗವೆಂದು ತಿಳಿದು ಸಾವಧಾನದಿಂದ "ತತ್ತ್ವಮಸಿ" ಎಂಬ ಮಹಾಕಾವ್ಯವನ್ನು ಭಾವಿಸುವುದು, ಮತ್ತು ಲಿಂಗವೇ ಶಿವ ಅಂಗವೇ ವಿಶ್ವವೆಂದು ತಿಳಿದು ಈ ವಿಶ್ವವನ್ನು (ಅಂಗವನ್ನು) ಆ ಲಿಂಗದಲ್ಲಿ (ಶಿವನಲ್ಲಿ) ಅಡಗಿಸುವುದೇ ಅಂಗಲಿಂಗ ಸಂಗವೆಂದು ತಿಳಿಯುವುದು. ಇದೇ ಶಿವಯೋಗ.

*ಶಿವಯೋಗದಲ್ಲಿ ಧ್ಯಾನ-ಧಾರಣೆ ಸಮಾಧಿ (ಉತ್ತರಯೋಗ)*

ಹೃದಯಕಮದಲ್ಲಿ, ಭ್ರೂಮಧ್ಯೇ ಧ್ಯಾನಿಸಿ ಹಾಗೂ ಬ್ರಹ್ಮರಂಧ್ರದಲ್ಲಿ ಶಿವಲಿಂಗವನ್ನು (ನೆಲೆಗೊಳಿಸಿ) ಹದುಳದಿಂದಿರುವುದಕ್ಕೂ ಹಾಗೂ ತನುತ್ರಯದೊಳಗೆ ತ್ರಿವಿಧಲಿಂಗವನ್ನು ಹುದುಗಿಸಿ, ಷಡ್ವಿಧಲಿಂಗ ವನ್ನು ಷಡಿಂದ್ರಿಯಗಳಲ್ಲಿ ನೆಲೆಗೊಳಿಸುವುದಕ್ಕೆ ಧಾರಣೆ (ಮನದ) ಎಂದು ಹೆಸರು.

*ಶಿವಯೋಗದಲ್ಲಿ ಸಮಾಧಿ*

ಇಷ್ಟಲಿಂಗದಲ್ಲಿ ಕಾರಣ ಸಂಚಯಗಳನ್ನು ಅಡಗಿ ದೃಷ್ಟದಿಂದ ತಾನು ಎದುರಿಗಿದ್ದೇನೆ ಎಂಬ ಭಾವನೆ ನಿಲ್ಲದೆ ಆ ಚಿದ್ಘನ ಲಿಂಗದಲ್ಲಿ ಚಿತ್‌ದೃಕ್ಕು (ಜ್ಞಾನಚಕ್ಷು) ನಿಲ್ಲುವುದೇ ಸಮಾಧಿ (ಅಸಂಗಪ್ರಜ್ಞಾತ ಸಮಾಧಿ) ನಿಷ್ಠೆಯಿಂದ ಇಷ್ಟಲಿಂಗವ ಬೇರೆ ಮಾಡದೆ 'ವಿಶಿಷ್ಟತರ ಪರಿಪೂರ್ಣ ಲಿಂಗವೇ ನಾನು' ಎಂಬ ನಂಬುಗೆಯ ಸ್ಪಷ್ಟತೆಯನ್ನು ಪಡೆದು ಲಿಂಗಕ್ರಿಯೆಗಳೆಲ್ಲಾ ನಿಷ್ಕ್ರಿಯೆಗಳಾವುದೇ ಸಮಾಧಿ. ಚಿತ್ತವು ಬುದ್ಧಿಯಲ್ಲಿ, ಬುದ್ಧಿಯು ಅಹಂಕಾರದಲ್ಲಿ, ಅಹಂಕಾರದಲ್ಲಿ ಮನ, ಮನವು ಉತ್ತಮ ಜ್ಞಾನದಲ್ಲಿ, ಜ್ಞಾನವು ಭಾವದಲ್ಲಿ, ಭಾವವು ಚಿತ್ಕಲೆಯಲ್ಲಿ, ಚಿತ್ಕಲೆಯು ವಸ್ತುವಿನಲ್ಲಿ ನೆಲೆನಿಂತು ಅತ್ತಿತ್ತ ಚಲಿಸದ ಪರವಸ್ತುವು ತಾನಾಗಿರುತ್ತಿರುವುದೇ ಸಮಾಧಿ.

ಘನಲಿಂಗವ ಚಕ್ಷುನುಂಗಿ, ಆ ಚಕ್ಷುವನ್ನು ಮನವು ನುಂಗಿ ಮನವನ್ನು ಭಾವನುಂಗಿ ಭಾವವನ್ನು ಚಿತ್ಕಲೆ ನುಂಗಿ, ಚಿತ್ಕಲೆಯ ಪರವಸ್ತುವು ನುಂಗಿ ಆ ಮಹಾವಸ್ತುವು ತನಗೆ ತಾನೇ ಆಗಿ ತನುವಂ ಮರೆದು ಪರಮಕಾಷ್ಠತೆ ಪಡೆದು ಅನ್ಯವನ್ನು ನೆನೆಯದ, ನೆನಹು ಎಂಬುದಿಲ್ಲದ ಅಚಲತ್ವ ಸ್ಥಿತಿಯೇ ಸಮಾಧಿ.

ಪರಂಜ್ಯೋತಿ ಸ್ವರೂಪನಾದ ಲಿಂಗವನ್ನು ನಿರುತದಿಂದ (ಎವೆಯಿಕ್ಕದೇ) ನೋಡಿ ನೋಡಿ ನಿಬ್ಬೆರಗು ನೆಲಸಿದ ಅನಿಮಿಷ ಕೇಶನಿಗೆ ಜ್ಞಾತೃ ಜ್ಞಾನ ಜ್ಞೇಯ ಎಂಬ ತ್ರಿಪುಟಿ ಅಳಿದು ಘನಮಹಾಲಿಂಗದಲ್ಲಿ ಬೆರೆಯುವುದೇ ಸುಸಮಾಧಿ (ಅಸಂಪ್ರಜ್ಞಾನ ಸಮಾಧಿ).

ಇಂಥ ಸುಸಮಾಧಿಯನ್ನು ಪಡೆದ ಸಿದ್ಧನ ಸ್ಥಿತಿಗೇ ಶಿವಯೋಗ ಎಂದು ಹೆಸರು. ತನ್ನಲ್ಲಿರುವ ಅಷ್ಟಮಹದೈಶ್ವರ್ಯಗಳನ್ನು ಜಂಗಮಕ್ಕೆ (ಜಗತ್ತಿಗೆ) ಕೊಟ್ಟು ವೈರಾಗ್ಯವನ್ನು ನಂಬಿ ಏಕಾಂತದೆಡೆಯೊಳು ಕುಳಿತು ಸುಸಮಾಧಿಯಿಮದ ತನ್ನನ್ನು ತಾನು ಅರಿಯದೆ ಕರತಲದಲ್ಲಿರುವ ತನು ಮನಃ ಪ್ರಾಣೇಂದ್ರಿಯಗಳನ್ನು ಅನವಿಂದ ಲಿಂಗದಲ್ಲಿ ಲೀನಗೊಳಿಸಿ ಒಡೆವೆರೆದು ನಿಬ್ಬೆರಗಾಂತು ಅಂದರೆ ನಿಶ್ಶೂನ್ಯ ಸ್ಥಿತಿಯನ್ನು ಪಡೆದವನೇ ಶಿವಯೋಗಿ. ಇಂಥ ಶಿವಯೋಗಿಯು ಹಸಿವು ತೃಷೆಗಳು ಹಿಂಗಿದ ನಿತ್ಯ ತೃಪ್ತಿಯನ್ನು ಪಡೆಯುತ್ತಾನೆ.

*ವಿಶೇಷ ವಿಚಾರ*

ಮುದ್ರಾ : ಮೋಚಯತಿ ದ್ರಾವಯತಿ ಇತಿ ಮುದ್ರಾ ಮುದ್ರೆಗಳು ರಾಜಯೋಗದಲ್ಲಿ ನಯನ ಮನ ಪ್ರಾಣಗಳನ್ನು ನಿಯಂತ್ರಿಸುವ ಸಾಧನೆಗಳು. ಖೇಚರೀ ಷಣ್ಮುಖೀ ಶಾಂಭವೀ ಮುಂತಾದವುಗಳು ಮುದ್ರಾಭೇದಗಳು. ಖೇಚರೀ ಮುದ್ರೆ. ಖೇ- ಆಕಾಶದಲ್ಲಿ ಚರಿ = ಚರಿಸುವ ಶಕ್ತಿಯನ್ನು ಸಾಧಿಸುವುದು. ಖೇಚರಿಯಲ್ಲಿ ೨ ವಿಧ. ಬಾಹ್ಯ ಖೇಚರಿ – ಆತಂರಿಕ ಖೇಚರಿ ಎಂದು. ದೃಷ್ಟಿಯನ್ನು ಭ್ರೂಮಧ್ಯೇ (ಹುಬ್ಬುಗಳ ಮಧ್ಯೆ) ಇರಿಸುವುದು ಬಾಹ್ಯ ಖೇಚರಿ. ಹೃತ್ಕಮಲದಲ್ಲಿ ಲಕ್ಷ್ಯವಿಡುವುದು ಆಂತರಿಕ ಖೇಚರಿ. ಇದು ಸರಳವಾದ ವಿವರಣೆ. ಹೆಚ್ಚಿನ ವಿವರಣೆಗೆ – ಘೇರಂಡ ಸಂಹಿತೆಯನ್ನು ನೋಡುವುದು.

ಶಾಂಭವೀಮುದ್ರೆ; ಶಿವನು ಪಾರ್ವತಿಗೆ ಹೇಳಿದುದರಿಂದ ಇದಕ್ಕೆ ಶಾಂಭವೀಮುದ್ರೆ ಎಂದು ಹೆಸರು ಮತ್ತು ಶಂಭು ಸ್ವರೂಪವನ್ನು ಕಾಣುವುದರಿಂದ ಇದಕ್ಕೆ ಈ ಹೆಸರು. ಈ ಶಾಂಭವೀ ಮುದ್ರೆಯೂ ೨ ವಿಧ, ಪೂರ್ವಶಾಂಭವೀ ಉತ್ತರ ಶಾಂಭವೀ ಎಂಬುದಾಗಿ ನಾಸಿಕಾಗ್ರದಲ್ಲಿ ದೃಷ್ಟಿಯಿಡುವುದು ಪೂರ್ವ ಶಾಂಭವೀ ನಾಸಿಕಾಗ್ರದಲ್ಲಿಟ್ಟ ದೃಷ್ಟಿಮನಗಳು ನಾದಬ್ರಹ್ಮನ ಅನುಸಂಧಾನದಲ್ಲಿ ಮುಳುಗುವುದು ಉತ್ತರ ಶಾಂಭವೀ ಸಹ ವಿವರಣೆಗೆ – ನಿಜಗುಣ ಶಿವಯೋಗಿಗಳ ನಾಸಿಕಾಗ್ರದಲ್ಲಿರಿಸಲ್ಪಟ್ಟ ಎಂಬ ಪದವನ್ನು ನೋಡಿರಿ.

★





# ರಕ್ತದೊತ್ತಡದಲ್ಲಿ ವ್ಯಾಯಾಮ

– ಡಾ. ಸಿ. ಎ. ಹಿರೇಮಠ
ರಾಣೇ ಬೆನ್ನೂರು.

ಅಧಿಕ ರಕ್ತದೊತ್ತಡ ಇಂದು ಸಾಮಾನ್ಯ ಕಾಯಿಲೆ ಎನಿಸಿಕೊಳ್ಳುತ್ತಿದೆ. ಕೆಲ ಸಮಯದ ಹಿಂದೆ ಇದು ಬರೀ ಶ್ರೀಮಂತರಲ್ಲಿ, ಅತೀ ಒತ್ತಡದ ಕಾರ್ಯಭಾರ ನಿರ್ವಹಿಸುವವರಲ್ಲಿ ಕಾಣಬರುವುದೆಂಬ ಅಭಿಪ್ರಾಯವಿತ್ತು.

ರಕ್ತದೊತ್ತಡ ಹಲವಾರು ಕಾಯಿಲೆಗಳಲ್ಲಿ ಪ್ರಮುಖ ಸ್ಥಾನ ಗಳಿಸಿದೆ. ಇದನ್ನು ಕ್ಲುಪ್ತ ಸಮಯದಲ್ಲಿ ಚಿಕಿತ್ಸೆ ಪಡೆಯದಿದ್ದರೆ ಹೃದಯಾಘಾತ, ಪಕ್ಷಾಘಾತಗಳೆಂಬ ಘೋರ ಸಮಸ್ಯೆಗಳಿಗೆ ಮಾಡಿಕೊಡಬಹುದು. ಬಹುತೇಕರು ಈ ರೋಗವನ್ನು ಸರಿಯಾದ ಸಮಯದಲ್ಲಿ ಗುರುತಿಸಿ ಚಿಕಿತ್ಸೆ ಪಡೆಯುವಲ್ಲಿ ಎಡವುತ್ತಾರೆ. ಏನಾದರೊಂದು ಗಂಭೀರ ಸಮಸ್ಯೆ ಉದ್ಭವಿಸಿದಾಗಲೇ ಈ ರೋಗದ ಪತ್ತೆ ಹಚ್ಚಿ ಚಿಕಿತ್ಸೆ ಪ್ರಾರಂಭವಾಗುವಷ್ಟರಲ್ಲಿ, ಸಮಯ ಮೀರಿರುತ್ತದೆ. ಸ್ಥೌಲ್ಯ, ಒತ್ತಡದ ಮಟ್ಟ, ದೈಹಿಕ ಚಟುವಟಿಕೆಗಳ ಆಧಾರದನುಸಾರ ಉತ್ತಮ ಚಿಕಿತ್ಸೆ ಪಡೆದಲ್ಲಿ ಅಧಿಕ ರಕ್ತದೊತ್ತಡವನ್ನು ಸಾಧ್ಯವಾದಷ್ಟು ನಿಯಂತ್ರಿಸಬಹುದು.

ವ್ಯಾಯಾಮ ಮಾಡುವಾಗ ರಕ್ತ ನಾಳಗಳು ಹಿಗ್ಗುತ್ತವೆ. ಈ ಹಿಗ್ಗುವಿಕೆಯು ರಕ್ತನಾಳಗಳ ಮೇಲೆ ಬೀಳುವ ಅಧಿಕ ಒತ್ತಡವನ್ನು ಕಡಿಮೆ ಮಾಡುತ್ತದೆ. ದಿನಂಪ್ರತಿ ಸರಿಯಾಗಿ ವ್ಯಾಯಾಮ ಮಾಡುವುದರಿಂದ ದೇಹಸ್ಥಿತಿ ಮಾಂಸಪೇಶಿಗಳಲ್ಲಿರುವ ಎಲ್ಲ ಸಣ್ಣ, ದೊಡ್ಡ ರಕ್ತನಾಳಗಳನ್ನು ವಿಕಸನಗೊಳಿಸಿ ಸಮಸ್ತ ದೇಹಕ್ಕೆ ಸಮರ್ಪಕವಾಗಿ ರಕ್ತಪೂರಣ, ತನ್ಮೂಲಕ ಆಮ್ಲಜನಕ ಪೂರಣ ಮಾಡಬಹುದು. ವ್ಯಾಯಾಮದ ಫಲವಾಗಿ ರಕ್ತಗತ ಆಮ್ಲಜನಕವನ್ನು ಹೆಚ್ಚು ಪ್ರಮಾಣದಲ್ಲಿ ಹೀರಿಕೊಂಡು ದೇಹಕ್ಕೆ ಪರಿಪೂರ್ಣ ಪ್ರಮಾಣದಲ್ಲಿ ಪೂರಿಪೂರ್ಣ ಪ್ರಮಾಣದಲ್ಲಿ ಪೂರೈಸಲು ಸಾಧ್ಯವಾಗುತ್ತದೆ.

ವ್ಯಾಯಾಮ ಮಾಡುವಾಗ ಅಧಿಕ ಸುಸ್ತು ಉಂಟಾದರೆ, ಎದೆ ಭಾರ, ನೋವು ಉಂಟಾದರೆ, ಶ್ವಾಸೋಚ್ಛ್ವಾಸಗತಿ ಅನಗತ್ಯ ಪ್ರಮಾಣದಲ್ಲಿ ಏರಿದಂತೆನಿಸಿದರೆ ತೀವ್ರವಾಗಿ ವೈದ್ಯರನ್ನು ಕಾಣಬೇಕು. ಅಲ್ಲಿಯವರೆಗೆ ಗಡಸು ವ್ಯಾಯಾಮವನ್ನು ನಿಲ್ಲಿಸಬೇಕು. ವ್ಯಾಯಾಮ ಮಾಡುತ್ತಿರುವಾಗ ಅತಿ ಆಯಾಸವೆನಿಸಿದರೆ, ನಿದ್ರೆ, ಜೋಂಪು ಬಂದಂತಾದರೆ ಹಿತವಾದ ಆರೋಗ್ಯದ ಲಕ್ಷಣವಲ್ಲ.

ವ್ಯಾಯಾಮವು ಮೈಮನಗಳ ಸ್ಫೂರ್ತಿಗೆ ಚಿಲುಮೆಯಾಗಬಲ್ಲ, ಚಿರಂಜೀವಿಯಾಗದಿದ್ದರೂ ಚಿರಯೌವನವಾದರೂ ಚಿರಕಾಲ ಉಳಿಯುವಂತೆ ಮಾಡಬಲ್ಲ ಸಾಧನ. ನೆನಪಾದಾಗಲೊಮ್ಮೆ, ನೆನೆಸಿದಾಗಲೊಮ್ಮೆ ಮಾಡುವುಂತಹುದಲ್ಲ. ದಿನನಿತ್ಯವೂ ಸ್ನಾನ, ಊಟ, ಕೆಲಸ ಕಾರ್ಯಗಳಂತೆಯೇ ಅಳವಡಿಸಿ, ಆಚರಿಸಿದರೆ ದೇಹ-ಮನಸ್ಸುಗಳೆರಡೂ ಸ್ಥಿರ-ಸುಭದ್ರವಾಗುಳಿಯಬಲ್ಲವು.

ನಮ್ಮಲ್ಲಿ ಅನೇಕರು ವೇಗನಡಿಗೆ, ವ್ಯಾಯಾಮಗಳನ್ನು ಮಾಡುತ್ತಾರೆ. ಆದರೆ ಅದನ್ನು ವಾರಕ್ಕೆ ಕನಿಷ್ಠ ಐದು ದಿನಗಳಷ್ಟಾದರೂ ಆಚರಿಸಿದರೆ ಮಾತ್ರ ಅನುಕೂಲ. ವಿವಿಧ ಕಾರಣಗಳನ್ನು ನೀಡುತ್ತ ತಮ್ಮ ಆಚರಣೆಗೆ ಗೈರು ಹಾಜರಾದುದಕ್ಕೆ ಏನೇನೋ ಸಮಜಾಯಿಷಿಗಳನ್ನು ತಾವೇ ನೀಡಿಕೊಳ್ಳುತ್ತ ಜಾರಿಕೊಳ್ಳುತ್ತಿರುತ್ತಾರೆ. ಇದೊಂದು ವ್ರತದ ತೆರದಿ ಅನುದಿನವೂ ಆಚರಿಸಿದರೆ ಆರೋಗ್ಯವೆಂಬ ಭಾಗ್ಯವ ನೀಡುವುದು. ವೈದ್ಯರ ಪ್ರಶ್ನಿಸಿದಾಗ ನಾವು ದಿನವೂ ವಾಕ್ ಮಾಡುತ್ತೇವೆಂದೇ ಬಹುಜನರು ಹೇಳುತ್ತಾರೆ. ಮಳೆ ಬಂದರೆ, ರಾತ್ರಿ ತಡವಾಗಿ ಮಲಗಿದರೆ, ಬೆಳಗಿನ ಛಳಿ ಬಹಳವಾದರೆ, ಮನೆಯಲ್ಲಿ ಅತಿಥಿಗಳ ಆಗಮನವಾದರೆ, ನಲ್ಲಿಯಲ್ಲಿ ನೀರು ಬರದಿದ್ದರೆ/ಬಂದರೆ, ಹೆಂಡತಿ ತವರಿಗೆ ಹೋದರೆ .... ಆಚರಿಸಲಾಗದಿದ್ದಾಗ ಆಲಸ್ಯತನಕ್ಕೆ ಕಾರಣಗಳನ್ನು ಹೇಳಿಕೊಡಬೇಕೇ?

ನಿರಂತರವಾದ ವೇಗನಡಿಗೆ, ದಿನನಿತ್ಯದ ವ್ಯಾಯಾಮಗಳು ಅಧಿಕ ರಕ್ತದೊತ್ತಡವನ್ನು ಖಂಡಿತವಾಗಿಯೂ ದೂರವಿಡುತ್ತದೆ. ವ್ಯಾಯಾಮ ಮಾಡುವಾಗ ಅಥವಾ ವೇಗನಡಿಗೆಗೆ ತೆರಳುವಾಗ ಮನಸ್ಸನ್ನು ಕೇಂದ್ರೀಕರಿಸಿ ನಿರಾಳವಾಗಿರಬೇಕು. ಆ ಸಮಯದಲ್ಲೂ ನಾವು ಖಿನ್ನತೆ, ಆತಂಕ, ಉದ್ವೇಗ, ಚಿಂತೆ, ವ್ಯಥೆಗಳನ್ನು ಅನುಭವಿಸುವ ಇಲ್ಲವೆ ನೆನಪಿಸಿಕೊಳ್ಳುತ್ತಲಿದ್ದರೆ ಮಾಡಿದ್ದೆಲ್ಲವೂ ವ್ಯರ್ಥವಾಗುವ ಸಂಭವ ಇರುತ್ತದೆ. ಇಡೀ ದಿನ ಜೀವನ ಜಂಜಾಟಗಳಿದ್ದದ್ದೇ. ಕನಿಷ್ಠ ದೈಹಿಕ ಚಟುವಟಿಕೆಗಳ ಚುರುಕುಗೊಳಿಸುವ ಸಂದರ್ಭಗಳಲ್ಲಾದರೂ ನಾವು ಎಲ್ಲ ಚಿಂತೆಗಳಿಂದ ದೂರವಿರುವುದು ಆರೋಗ್ಯದ ದೃಷ್ಟಿಯಿಂದ ಒಳಿತು.

ನಮ್ಮಲ್ಲನೇಕರು ಬೆಳಗಿನ ಸಮಯದಲ್ಲಿ ವಾಯುವಿಹಾರಕ್ಕೆಂದು ತೆರಳುತ್ತಾರೆ. ಇದು ಒಳ್ಳೆಯದೇ. ಆದರೆ ಇವರು ತಾವೊಬ್ಬರೇ ವಿಹಾರಕ್ಕೆ ತೆರಳಲಿಷ್ಟಪಡದೇ ಸಮಾಜದ ಸಹಜೀವಿಗಳನ್ನೂ ಕರೆದೊಯಲಿಚ್ಛಿಸುತ್ತಾರೆ. ಅಂದರೆ ನಾಯಿಗಳೂ ಇವರನ್ನು ಹಿಂಗಾಲಿಸುತ್ತಿರುತ್ತವೆ. ಇವರು ವಿಹಾರ ಮಾಡುತ್ತಿರುವಾಗಲಾದರೂ ನಿಶ್ಚಿಂತೆಯಿಂದ, ನಿರಾಳವಾಗಿ, ಸಮಸ್ಯೆಗಳೆಲ್ಲವನ್ನೂ ಮರೆತು ಬೆಳಗಿನ ಶುಭ್ರ ವಾತಾವರಣದ ಶುದ್ಧ ಹವೆಯನ್ನು ಸೇವನೆ ಮಾಡಲಾದೀತೇ? ಸಾಧ್ಯವಿಲ್ಲ! ಏಕೆಂದರೆ ಇವರ ಗಮನ ತಮ್ಮ ಮಾನಸಿಕ ಒತ್ತಡ ನಿವಾರಿಸಿಕೊಂಡು ಆರೋಗ್ಯವನ್ನು ಕಾಯ್ದುಕೊಳ್ಳಬೇಕೆಂಬುದಕ್ಕಿಂತ, ತಮ್ಮ ಜೊತೆ ಕರೆತಂದಿರುವ ನಾಯಿಗೆ ಬೇರೆ ನಾಯಿ ಬೆನ್ನಟ್ಟ ಬಾರದೆಂಬುದರ ಇಲ್ಲವೇ ತಮ್ಮ ನಾಯಿ ಯಾವುದೋ ದರವೇಶಿ ನಾಯಿ ಬೆನ್ನು ಬೀಳಬಾರದೆಂಬುದರ ಕಡೆಗೇ

ಇರುತ್ತದೆ. ನಾಯಿ ಸಾಕುವುದು, ವಿಹಾರಕ್ಕೆ ಕರೆದೊಯ್ಯುವುದು ಇಲ್ಲಿಯ ಆಕ್ಷೇಪವಲ್ಲ. ಅದಕ್ಕಾಗಿ ಬೇರೆ ಸಮಯವನ್ನು ಅಥವಾ ಬೇರೆಯವರನ್ನು ನಿಯೋಜಿಸಿದರೆ ಇಡೀ ದಿನದ ಜಂಜಡಗಳ ಮರೆಯುವುದರ ಜೊತೆಗೆ ಬೆಳಗಿನ ಆಹ್ಲಾದಕರ ವಾತಾವರಣವನ್ನು ಸಂಪೂರ್ಣವಾಗಿ ಸವಿಯುವುದು ಸಾಧ್ಯವಾಗುತ್ತದೆ ಎಂಬ ಆಶಯವಿದಾಗಿದೆ.

ಇನ್ನು ಕೆಲವು ಜನರು ತಮ್ಮೊಟ್ಟಿಗೆ ಹತ್ತು ಜನರನ್ನು ಸೇರಿಸಿಕೊಂಡು, ಹಲವು ವಿಚಾರಗಳ ವಿಮರ್ಶೆ ಮಾಡುತ್ತ ವಾಯುವಿಹಾರ ಮಾಡುತ್ತಿರುತ್ತಾರೆ. ಮನುಷ್ಯನು ತನ್ನ ಮಾನಸಿಕ ಪರಿಸ್ಥಿತಿಯ ನಿಭಾವಣೆ ಸರಿಯಾಗಿ ಮಾಡಿಕೊಳ್ಳುತ್ತಿಲ್ಲವೆಂಬುದರ ಹಾಗೂ ಉತ್ತಮ ಆಹಾರ, ವಿಹಾರ, ಅಭಿರುಚಿಗಳ ಹವ್ಯಾಸವನ್ನು ಬೆಳೆಸಿಕೊಳ್ಳುತ್ತಿಲ್ಲದ್ದರ ಪರಿಣಾಮವಾಗಿ ಇಂದು ಅಧಿಕ ರಕ್ತದೊತ್ತಡ, ಮಧುಮೇಹವೇ ಮೊದಲಾದ ಕಾಯಿಲೆಳಿಂದ ನರಳುತ್ತಿದ್ದಾನೆ. ಇವುಗಳನ್ನು ನಿವಾರಿಸುವಲ್ಲಿ ಮಾನಸಿಕ ಸ್ವಸ್ಥತೆ, ದೈಹಿಕ ಸದೃಢತೆ ಅವಶ್ಯಕವೆಂದು ತಿಳಿದುಬಂದಿರುವ ಕಾರಣ ಈ ವೇಗನಡಿಗೆ, ವಾಯುವಿಹಾರ, ವ್ಯಾಯಾಮಗಳನ್ನು ಮುನಿಮಹರ್ಷಿಗಳ ಕಾಲದಿಂದ ಇಂದಿನ ವೈದ್ಯ ವಿಜ್ಞಾನಿಗಳೂ ಹೇಳುತ್ತ ಬಂದಿದ್ದಾರೆ. ನಾವು ವಾಯುವಿಹಾರದ ಸಮಯದಲ್ಲಿ ಸಮಾಜದ, ರಾಜಕೀಯದ, ಸಂಸಾರ ಸಮಸ್ಯೆಗಳ ಕುರಿತು ಹರಟುತ್ತ ಹೋದರೆ, ಪಕ್ಕದ ಮನೆಯ ಸೊಸೆ ಹೀಗಂದಳಂತೆ ಎಂದು ಸಹ ವಿಹಾರಿ ಹೇಳಿದಾಗ, ನಿಮ್ಮ ಮನೆಯ ಸೊಸೆಯ ಅಥವಾ ಅತ್ತೆಯ ಕುರಿತು ನೀವು ಮಾತನಾಡುವುದಿಲ್ಲವೇ? ಮಾತು ರಂಗೇರಿದಂತೆ ನಿಮ್ಮ ಭೂತ, ಭವಿಷ್ಯದ ಅನುಭವಗಳ ಬುತ್ತಿಯ ಗಂಟನ್ನು ನೀವು ಬಿಚ್ಚುತ್ತ ಹೋಗುವುದಿಲ್ಲವೇ? ಆಗ ಮನಸ್ಸು ವಿನಾಕಾರಣ ಕ್ಷೋಭೆಗೊಳ್ಳುವುದಿಲ್ಲವೇ? ಅಧಿಕ ರಕ್ತದೊತ್ತಡವನ್ನು ನಿವಾರಿಸಲೆಂದು ನೀವು ದಿನಾಲೂ ವಾಯುವಿಹಾರಕ್ಕೆ ತೆರಳುತ್ತೀರಿ. ದಿನವೂ ಇಂತಹುದೇ ಮಾತುಕತೆಗಳು ನಡೆಯುತ್ತಲಿರುತ್ತವೆ. ಆಗ ನಿಮ್ಮ ರಕ್ತದೊತ್ತಡ ಇಳಿಯುವ ಬದಲು ಖಂಡಿತವಾಗಿಯೂ ಏರುತ್ತದೆ. ಆದ್ದರಿಂದ ವಾಯುವಿಹಾರಕ್ಕಾಗಲೀ, ವ್ಯಾಯಮ ಮಾಡುವುದಕ್ಕಾಗಾಲೀ ತೆರಳುವಾಗ ನೀವೊಬ್ಬರೇ ನಿಮ್ಮ ಆರಾಧ್ಯದೈವವನ್ನು ನೆನಸಿಕೊಳ್ಳುತ್ತ, ಮನಸ್ಸನ್ನು ಎಲ್ಲ ವ್ಯಥೆ, ಚಿಂತೆಗಳಿಂದ ಮುಕ್ತವಾಗಿರಿಸಿಕೊಂಡು ಏಕಾಗ್ರತೆಯಿಂದ ಮನೋನಿಯಂತ್ರಣ ಮಾಡಿಕೊಂಡು ಆಚರಿಸಿದಾಗ ನಿಶ್ಚಿತವಾಗಿಯೂ ಅಧಿಕ ರಕ್ತದೊತ್ತಡ ಕಡಿಮೆಯಾಗುವುದು.

ವ್ಯಾಯಾಮ, ಯೋಗ ಮಾಡುವಾಗ ನಾವು ಭಾರೀ ಭಾರೀ ಆಸನಗಳನ್ನು ಹಾಕುತ್ತಿರುತ್ತೇವೆ. ಮನಸ್ಸು ಅಂಗಡಿಯಲ್ಲಿ. ಅದು ಇಲ್ಲ, ಇದು ತರಬೇಕಿತ್ತು ಎಂದು ಯೋಚಿಸುತ್ತಿರುತ್ತದೆ. ಯೋಚಿಸಲು ನಮಗೆ ಇದೇ ಸಮಯವೇ ಆಗಬೇಕೇ? ನಾವು ಯೋಚಿಸಿದಂತೆ, ಯೋಜಿಸಿದಂತೆ ಯಾವುದೂ ನಡೆಯುವುದಿಲ್ಲ, ಸಂಭವಿಸುವುದಿಲ್ಲ, ಆದರೆ ಜೀವನದಲ್ಲಿ ಒಂದು ಯೋಜನಾಬದ್ಧ ತರ್ಕ ಇರಬೇಕು. ಅದಕ್ಕಾಗಿ ಆರೋಗ್ಯ ರಕ್ಷಣೆಗಾಗಿ ಕೈಗೊಳ್ಳುವ ಉಪಕ್ರಮಗಳ ಸಮಯದಲ್ಲಾದರೂ ವಿರಾಮ ನೀಡಿರಬೇಕು.

★

## ನಿಸರ್ಗ ಚಿಕಿತ್ಸೆ

ನಿಸರ್ಗ ಚಿಕಿತ್ಸೆ ಔಷಧಿಗಳಿಲ್ಲದ ಒಂದು ಚಿಕಿತ್ಸೆ. ಆಹಾರ ವಿಹಾರಗಳು ಇಲ್ಲಿ ಮುಖ್ಯ. ಉಪವಾಸ ಶ್ವಾಸೋಚ್ಛ್ವಾಸ, ಜಲ, ಸ್ನಾನ, ಸೂರ್ಯಸ್ನಾನ, ಮೃತ್ತಿಕೆ ಸ್ನಾನ, ಬಯಲು ಸ್ನಾನ – ಹೀಗೆ ಪಂಚಭೂತಗಳಿಗೆ ಸಂಬಂಧಿಸಿದ ಸಹಜ ಚಿಕಿತ್ಸೆಗಳು ಇಲ್ಲಿಯ ವೈಶಿಷ್ಟ್ಯ. ಔಷಧಿರಹಿತ ಚಿಕಿತ್ಸೆ ಮತ್ತು ಜೀವಕಣಗಳ ನಕ್ಷೆ ರೂಪಿಸುವ ಈ ಕಾಲದಲ್ಲಿ ನಿಸರ್ಗ ಚಿಕಿತ್ಸೆ ನಮ್ಮ ಎಲ್ಲ ಸಂಶಯಗಳನ್ನು ಯಶಸ್ವಿಯಾಗಿ ಪರಿಹರಿಸುತ್ತದೆ. ಅದು ಆರೋಗ್ಯಕರ ಆಹಾರ ಮತ್ತು ಜೀವನ ಶೈಲಿಗೆ ಯಾವುದೇ ತೊಂದರೆ ಯಿಲ್ಲದ ಮತ್ತು ನೆರವಾಗುವ ಮಾರ್ಗಕ್ರಮಗಳ ಒಂದು ಸಂಪತ್ತನ್ನೇ ಒದಗಿಸುತ್ತದೆ. ಅದರ ಅನೇಕ ಸೂತ್ರಗಳಲ್ಲಿ ಹಣ್ಣು, ತರಕಾರಿ ಮತ್ತು ಇಡಿಕಾಳಿನ ಆಹಾರ ಈಗ ಅರ್ಬುಧ ರೋಗ, ಹೃದ್ರೋಗ ಮತ್ತು ಸ್ಥೂಲ ಕಾಯಗಳನ್ನು ಕಡಿಮೆ ಮಾಡಲು ಬಯಸುವವರಿಗೆ ಗೊತ್ತಾದ ಶಿಫಾರಸ್ಸು ಮಾಡಲ್ಪಟ್ಟ ಆಹಾರಗಳಾಗಿವೆ. ನಮ್ಮ ದೇಹದಲ್ಲಿ ಸಹಜವಾಗಿಯೇ ರೋಗ ಚಿಕಿತ್ಸೆಯ ಶಕ್ತಿಗಳಿವೆ. ನಿಸರ್ಗ ಚಿಕಿತ್ಸೆ ಮೂಲಭೂತವಾಗಿ ಈ ಶಕ್ತಿಗಳನ್ನೇ ಬಳಸಿ ರೋಗ ನಿವಾರಿಸಲು ಪ್ರಯತ್ನಿಸುತ್ತದೆ. ಅದು ರಾಸಾಯನಿಕ ಔಷಧಿಗಳ ಮತ್ತು ಅಕ್ರಮಣಕಾರೀ ಚಿಕಿತ್ಸಾ ಕ್ರಮಗಳನ್ನು ನಿರಾಕರಿಸುತ್ತದೆ. ರೋಗದ ಕಾರಣಗಳನ್ನು ಪತ್ತೆ ಹಚ್ಚಿ ಒಟ್ಟು ಚಿಕಿತ್ಸೆಗೆ (ಭಾವನಾತ್ಮಕ, ಜನಿತಾತ್ಮಕ ಮತ್ತು ಪರಿಸರ ಪ್ರಭಾವಿತ) ಒತ್ತು ಕೊಡುತ್ತದೆ. ''ಮೊದಲು ಯಾವುದೇ ಹಾನಿ ಮಾಡದಿರು'' ಎಂಬ ವೈದ್ಯಕೀಯ ಧ್ಯೇಯ ವಾಕ್ಯವನ್ನು ನಿಸರ್ಗ ಚಿಕಿತ್ಸೆ ಗಂಭೀರವಾಗಿ ಪರಿಗಣಿಸುತ್ತದೆ.

ಅಂತರರಾಷ್ಟ್ರೀಯವಾಗಿ ನಿಸರ್ಗ ಚಿಕಿತ್ಸೆ ಹೊಸ ಶತಮಾನದ ಒಂದು ಮೌಲಿಕ ಕೊಡುಗೆಯಾಗಿ ಹೊಮ್ಮಿ ನಿಂತಿದೆ. ವೈದ್ಯರಲ್ಲೂ ಅದು ಸಕಾರಾತ್ಮಕ ಧೋರಣೆಯನ್ನು ಮೂಡಿಸಿದೆ. ಅಮೇರಿಕದಂತಹ ಮುಂದುವರಿದ ರಾಷ್ಟ್ರಗಳಲ್ಲೂ ನಿಸರ್ಗ ಚಿಕಿತ್ಸೆಗೆ ಸಂಬಂಧಿಸಿದ ಸಂಶೋಧನಾ ಸಾಹಿತ್ಯ ಗಮನ ಸೆಳೆದಿದೆ. ಈಗ ''ಏಡ್ಸ್'' ನಂತಹ ಮಾರಕ ರೋಗ ಚಿಕಿತ್ಸೆಯ ಬಗೆಗೂ ನಿಸರ್ಗ ಚಿಕಿತ್ಸೆ ನಿರೀಕ್ಷೆ ಇಟ್ಟುಕೊಂಡಿದೆ.

(ಲೋಕ ಸಂಗ್ರಹ)





## ಧರ್ಮಸಭೆ



ಉಡುಪಿ ಪೇಜಾವರ ಮಠದ ಶ್ರೀ ಶ್ರೀಗಳವರಿಂದ ಆಶೀರ್ವಚನ.


ವೇದಿಕೆಯಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು.

ನವೆಂಬರ್ ೧ರಂದು ಶಿವಮೊಗ್ಗ ಜಿಲ್ಲೆ ಶಿಕಾರಿಪುರದಲ್ಲಿ ಕರ್ನಾಟಕ ವಿಧಾನಸಭೆ ವಿರೋಧಪಕ್ಷದ ನಾಯಕರಾದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರ ಧರ್ಮಪತ್ನಿ ಲಿಂಗೈಕ್ಯ ಶರಣೆ ಮೈತ್ರಾದೇವಿಯವರ ಶಿವಗಣಾರಾಧನೆ ಅಂಗವಾಗಿ ಏರ್ಪಡಿಸಿದ್ದ ಧರ್ಮಸಭೆಯು ಶ್ರೀ ಸಿದ್ಧಗಂಗಾ ಕ್ಷೇತ್ರಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು.

ಪೂಜ್ಯ ಶ್ರೀ ಶ್ರೀಗಳವರು ಮಾತನಾಡಿ, ಅನೇಕ ಸಾಧಕರ ಹಿಂದೆ ಪ್ರೇರಕ ಶಕ್ತಿಯಾಗಿ ಮಹಿಳೆ ಇರುತ್ತಾಳೆ. ಅಗಲಿಕೆ ತೀವ್ರ ದುಃಖ ತರುವುದು ಸಹಜ. ಇದನ್ನು ಸಹಿಸಿಕೊಂಡು ಸಮಾಜದ ಸೇವೆ ಮಾಡಬೇಕು ಎಂದು ಸಾಂತ್ವನ ನೀಡಿದರು. ಪ್ರಜಾಪ್ರಭುತ್ವದಲ್ಲಿ ಜನನಾಯಕರೇ ರಾಜರು, ಪ್ರಜೆಗಳು ಅವರನ್ನೇ ಅನುಸರಿಸುತ್ತಾರೆ. ಹೀಗಾಗಿ ಜನಪ್ರತಿನಿಧಿಗಳ ಮೇಲೆ ಸಾಮಾಜಿಕ ಹೊಣೆಗಾರಿಕೆ ಹೆಚ್ಚು. ಪ್ರಸ್ತುತ ಸಮಾಜದಲ್ಲಿ ನಿಸ್ವಾರ್ಥ ಜನನಾಯಕರ ಕೊರತೆ ಎದ್ದು ಕಾಣುತ್ತದೆ ಎಂದು ವಿಷಾದ ವ್ಯಕ್ತಪಡಿಸಿದರು.

ಉಡುಪಿ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮಿಗಳು ಮಾತನಾಡಿ, ಕಷ್ಟದ ದಿನಗಳನ್ನು ಎದುರಿಸಿದಾಗ ಮಾತ್ರ ಮನುಷ್ಯನ ವ್ಯಕ್ತಿತ್ವ ಸದೃಢಗೊಳ್ಳುತ್ತದೆ. ಹುಟ್ಟು-ಸಾವಿನ ನಡುವೆ ಇರುವ ಸಮಯದಲ್ಲಿ ಇನ್ನೊಬ್ಬರಿಗೆ ಅನ್ಯಾಯವೆಸಗದೇ, ಸಾಧ್ಯವಾದಷ್ಟು ಸಮಾಜ ಸೇವೆಯನ್ನು ಮಾಡುವ ಮೂಲಕ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂದರು.

ಶ್ರೀ ಬಿ.ಎಸ್. ಯಡಿಯೂರಪ್ಪನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪತ್ನಿಯೊಂದಿಗೆ ಇದ್ದ ಒಡನಾಟದ ಕೆಲವು ಆತ್ಮೀಯ ಕ್ಷಣಗಳನ್ನು ನೆನಪಿಸಿಕೊಂಡರು.

ಹೊಸದುರ್ಗ ಕನಕ ಗುರುಪೀಠದ ಶ್ರೀ ಶ್ರೀ ಈಶ್ವರಾನಂದ ಸ್ವಾಮೀಜಿ, ಗೋಸಾಯಿ ಮಠದ ಶ್ರೀ ಶ್ರೀ ಸುರೇಶ್ವರಾನಂದ ಸ್ವಾಮೀಜಿ, ಆನಂದಪುರದ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮೀಜಿ, ಸಿರಿಗೆರೆಯ ಶ್ರೀ ಶ್ರೀ ಪಂಡಿತಾರಾಧ್ಯ ಸ್ವಾಮೀಜಿ, ನಂದೀಗುಡಿಯ ಶ್ರೀ ಶ್ರೀ ನಂದೀಶ್ವರ ಸ್ವಾಮೀಜಿ, ಹೊನ್ನಾಳಿ ಹಿರೇಕಲ್ಮಠದ ಶ್ರೀ ಶ್ರೀ ಒಡೆಯರ್ ಚಂದ್ರಶೇಖರ ಸ್ವಾಮೀಜಿ, ವೀರಾಪುರದ ಶ್ರೀ ಶ್ರೀ ಮರುಳಸಿದ್ಧ ಪಂಡಿತಾರಾಧ್ಯ ಸ್ವಾಮೀಜಿ, ತಿಪ್ಪಾಯಿ ಕೊಪ್ಪದ ಶ್ರೀ ಶ್ರೀ ವಿರೂಪಾಕ್ಷ ಸ್ವಾಮೀಜಿ, ಶಿವಯೋಗಾಶ್ರಮದ ರೇವಣಸಿದ್ಧ ಸ್ವಾಮೀಜಿ ವೀರಶೈವ ಮಹಾಸಭಾದ ಅಧ್ಯಕ್ಷ ಶ್ರೀ ಭೀಮಣ್ಣ ಖಂಡ್ರೆ, ಶ್ರೀ ಪಿ.ವಿ. ಕೃಷ್ಣಭಟ್, ವಿಧಾನ ಪರಿಷತ್ ವಿರೋಧ ಪಕ್ಷದ ನಾಯಕ ಶ್ರೀ ಡಿ.ಎಚ್. ಶಂಕರಮೂರ್ತಿ, ಶಾಸಕರಾದ ಶ್ರೀ ಕೆ.ಎಸ್. ಈಶ್ವರಪ್ಪ ಮೊದಲಾದ ಗಣ್ಯರು ಹಾಜರಿದ್ದರು.

★

## ತೌರುನೆಲದಲ್ಲಿ ಶ್ರೀ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ ಅವರಿಗೆ ಅಭಿನಂದನೆಯ ಸುರಿಮಳೆ

ನವೆಂಬರ್ ೨೪ರಂದು ತುಮಕೂರಿನಲ್ಲಿ ಹಬ್ಬದ ವಾತಾವರಣ, ಕಾಡುಗಳ್ಳ, ನರಹಂತಕ ವೀರಪ್ಪನ್ ಅಂತ್ಯ ಕಾಣಲು ಹೋರಾಟ ನಡೆಸಿದ, ಎಸ್.ಟಿ.ಎಫ್. ಮುಖ್ಯಸ್ಥ ಶ್ರೀ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಹಾಗೂ ಸಿಬ್ಬಂದಿ ವರ್ಗ ಸೇರಿದಂತೆ [illegible] ತುಮಕೂರಿನ ಜೂನಿಯರ್ ಕಾಲೇಜ್ ಮೈದಾನದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಾಗರಿಕ ಸಮಿತಿ ವತಿಯಿಂದ ನಡೆದ ಅಭಿನಂದನಾ ಕಾರ್ಯಕ್ರಮದಲ್ಲಿ ಆತ್ಮೀಯವಾಗಿ ಸನ್ಮಾನಿಸಲಾಯಿತು.

ಮಂಚಕಲ್‌ಕುಪ್ಪೆ ಟೋಲ್‌ಗೇಟ್‌ನಿಂದ ತುಮಕೂರಿನ ಜೂನಿಯರ್ ಕಾಲೇಜು ಮೈದಾನದವರೆಗೂ ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿಯವರನ್ನು ಮೆರವಣಿಗೆಯಲ್ಲಿ ಬರಮಾಡಿಕೊಳ್ಳಲಾಯಿತು. ದಾರಿಯುದ್ದಕ್ಕೂ ಸಾರ್ವಜನಿಕರು, ವಿವಿಧ ಸಂಘ ಸಂಸ್ಥೆಗಳವರು ಶ್ರೀ ಮಿರ್ಜಿಯವರಿಗೆ ಪುಷ್ಪಹಾರ ಹಾಕಿ ಗೌರವಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿ ದಂಪತಿಗಳಿಗೆ ಶಾಲು ಹೊದಿಸಿ ಪುಷ್ಪಹಾರ ಹಾಕಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ಶ್ರೀ ಮಿರ್ಜಿ ಅವರು ಸಮಾಜಕ್ಕೆ ಸಲ್ಲಿಸಿದ ಸಾಧನೆ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಸನ್ಮಾನ ಸ್ವೀಕರಿಸಿ ಮಾತನಾಡಿದ ಶ್ರೀ ಮಿರ್ಜಿ ಅವರು ಬಾಲ್ಯದಿಂದಲೂ ಆಟವಾಡಿ ಬೆಳೆದ ತನ್ನ ತವರೂರಿನ ಮೈದಾನದಲ್ಲೇ ಇಂದು ನನ್ನನ್ನು ಸನ್ಮಾನಿಸುತ್ತಿರುವುದು ನನಗೆ ಅತ್ಯಂತ ಸಂತೋಷವಾಗಿದೆ ಎಂದು ಭಾವಪರವಶರಾಗಿ ನುಡಿದರು.

ಎರಡು ರಾಜ್ಯಗಳಿಗೂ ಕಂಟಕನಾಗಿದ್ದ ವೀರಪ್ಪನ್‌ನನ್ನು ಹಿಡಿಯುವುದು ಕಷ್ಟವಾಗಿತ್ತು. ಇಡೀ ಪೋಲೀಸ್ ಇಲಾಖೆಗೆ ಆತನಿಂದ ಕೆಟ್ಟ ಹೆಸರು ಬಂದಿತ್ತು. ಇತಿಹಾಸದಲ್ಲೇ ಒಬ್ಬ ವ್ಯಕ್ತಿಯ ತಲೆಗೆ ೫ ಕೋಟಿ ೫೦ ಲಕ್ಷ ರೂ. ಘೋಷಿಸಿದ್ದು ಇದೇ ಮೊದಲು ಎಂದು ತಿಳಿಸಿದ ಶ್ರೀ ಮಿರ್ಜಿ ಅವರು ಇಡೀ ಪ್ರಕರಣದ ವಿವರವನ್ನು ಎಳೆ ಎಳೆಯಾಗಿ ವಿವರಿಸಿದರು.

ಕಾರ್ಯಕ್ರಮದಲ್ಲಿ ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶಾಸಕರಾದ ಶ್ರೀ ಎಚ್. ನಿಂಗಪ್ಪ, ಶ್ರೀ ಎಸ್.ಆರ್. ಶ್ರೀನಿವಾಸ್, ಶ್ರೀ ಎಸ್. ಶಿವಣ್ಣ, ಉದ್ಯಮಿ ಶ್ರೀ ಎನ್.ಆರ್. ಜಗದೀಶ್, ಶ್ರೀ ಜ್ಯೋತಿಪ್ರಕಾಶ್ ಮಿರ್ಜಿ ಅವರ ತಂದೆ ಮಾಜಿ ಶಾಸಕ ಶ್ರೀ ಬಿ.ಪಿ. ಗಂಗಾಧರ್ ಮೊದಲಾದ ಗಣ್ಯರು ಭಾಗವಹಿಸಿದ್ದರು. ಸಾಹಿತಿ ಶ್ರೀ ಹ.ಬ. ಮಹಾದೇವಪ್ಪ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀ ರೆಡ್ಡಿ ಚೆನ್ನಯಲ್ಲಪ್ಪ ಕಾರ್ಯಕ್ರಮ ನಿರೂಪಿಸಿದರು. ★

### ಶ್ರೀವಾಣಿ

ಶಿವಾನುಭವ ಗಹನಕ್ಕೆ ಗಹನ; ಸರಳಕ್ಕೆ ಸರಳ. ಶಿವಾನುಭವವನ್ನು ಎಲ್ಲರೂ ಅರಿತು ಆಚರಣೆಗೆ ತರುವುದು ಸಾಧ್ಯವಿಲ್ಲ ವೆಂಬ ಮಾತನ್ನು ಒಪ್ಪುವುದಕ್ಕಾಗುವುದಿಲ್ಲ. ದರ್ಶನಭಾಗ್ಯ, ಸಿದ್ಧಾಂತಭಾಗ, ಶಾಸ್ತ್ರ ಮಥನಮಾಡದೆ ಶಿವಾನುಭವ ಅಳವಡುವುದಿಲ್ಲವೆಂದೂ ಯಾರಾದರೂ ತಿಳಿದಿದ್ದರೆ ಅದು ತೀರಾ ಸುಳ್ಳು. ಅದರಲ್ಲಿ ಸಾಮಾನ್ಯ ಮನುಷ್ಯನಿಗೂ ಕೂಡ ಆಸಕ್ತಿ ಬಂದರೆ ಸಾಕು, ಮುಗ್ಧರಾಗಿದ್ದರೂ ಶಿವಾನುಭವವನ್ನು ಅರ್ಥಮಾಡಿಕೊಂಡು ಅನುಭವಕ್ಕೆ ತಂದುಕೊಳ್ಳಬಹುದು. ಈ ಲೋಕದ ಯಥಾರ್ಥವಾದ ಅನುಭವವೇ ಶಿವಾನುಭವನೆನಿಸಿಕೊಳ್ಳುವುದು. ಸಮಗ್ರ ಬ್ರಹ್ಮಾಂಡವೇ ಶಿವಸ್ವರೂಪ. ಆ ಸ್ವರೂಪವೇ ಪೂಜಾರ್ಹವಾದ ಲಿಂಗ. ಆ ಲಿಂಗವನ್ನು ದೀಕ್ಷಾ ವಿಧಿಯಿಂದ ಕರಸ್ಥಲಕ್ಕೆ ತಂದು ಕೊಟ್ಟಾತನೇ ಗುರುವು. ಹೀಗೆ ಗುರುವು ಕೊಟ್ಟ ಶಿವದೀಕ್ಷೆಯ ಗತಿಮತಿಗಳ ಸಮನ್ವಯ ಸಾಧನೆಯನ್ನು ಸಿದ್ಧಮಾಡಿಕೊಡುವ ಲಿಂಗದ ಚೈತನ್ಯಮುಖವೇ ಜಂಗಮ. ಈ ಗುರು ಜಂಗಮದ ಮೂಲಕ ಪಡೆಯುವುದೇ ಪಾದೋದಕ ಪ್ರಸಾದ, ಈ ಪ್ರಸಾದವನ್ನು ಲಿಂಗ ಭೋಗೋಪಭೋಗವೆಂದು ಭಾವಿಸುತ್ತ ಲೋಕದೊಡನೆ ಬಾಳುವ ವೀರಶೈವನ ನಡೆನುಡಿಗಳೇ ಶಿವಾನುಭವ ಎನಿಸುವುದು. ಸದ್ಗುಣ ಸತ್ಶೀಲಗಳಿಂದ ಕೂಡಿದ ಲೋಕ ಜೀವನ, ಶ್ರದ್ಧಾ ಭಕ್ತಿ ವಿಶ್ವಾಸ ಪೂರ್ಣವಾದ ಕಾರ್ಯ ಇವೆಲ್ಲ ಶಿವಾನುಭವದ ಪ್ರಭಾವ ಬೀರಲಿಕ್ಕೆ ಸಹಾಯಕಗಳಾಗುತ್ತವೆ.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೫೮೯. | ಶ್ರೀ ಸಿದ್ದಪ್ಪ<br>ಸೇವಕರು | ೨,೦೦೦.೦೦ |
| ೧೫೯೦. | ಶ್ರೀ ಎಸ್. ಚಂದ್ರಶೇಖರಯ್ಯ<br>ಸೇವಕರು | ೨,೦೦೦.೦೦ |
| | ಕ್ರ.ಸಂ. ೧೫೮೯ ರಿಂದ ೧೫೯೦ರ ವರೆಗಿನ ವಿಳಾಸ<br>ಶ್ರೀ ವಿನಾಯಕ ಸಂಜೆ ಪದವಿ ಪೂರ್ವ ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | |
| ೧೫೯೧. | ಶ್ರೀ ಕೆ.ಜಿ. ಚಂದ್ರಶೇಖರ<br>ಸಹ ಶಿಕ್ಷಕರು | ೨,೦೦೧.೦೦ |
| ೧೫೯೨. | ಶ್ರೀ ಎನ್.ಇ. ಜಗದೀಶ್<br>ಪ್ರ.ಶಾ.ಸ. | ೨,೦೦೧.೦೦ |
| | ಕ್ರ.ಸಂ. ೧೫೯೧ ರಿಂದ ೧೫೯೨ರ ವರೆಗಿನ ವಿಳಾಸ<br>ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶುಕ್ರವಾರ ಸಂತೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | |
| ೧೫೯೩. | ಶ್ರೀ ಮೂಲೀಸ್‌ಮಠದ ಲಿಂ. ಎಸ್. ಮಹಾಂತಶಾಸ್ತ್ರಿಗಳು<br>ಬಿನ್ ವೇ. ಜಿ.ಎಂ. ಚನ್ನಬಸವಾರಾಧ್ಯ,<br>ಗುಡೇಮಾರನಹಳ್ಳಿ ಮತ್ತು ಅಂಚೆ,<br>ಮಾಗಡಿ ತಾ. ಬೆ.ಗ್ರಾ. ಜಿಲ್ಲೆ. | ೧,೦೦೧.೦೦ |
| ೧೫೯೪. | ಶ್ರೀಮತಿ ರುದ್ರಮ್ಮ<br>ಸಹ ಶಿಕ್ಷಕರು | ೨,೦೦೦.೦೦ |
| ೧೫೯೫. | ಶ್ರೀ ರೇಣುಕಾರಾಧ್ಯ<br>ಸಹ ಶಿಕ್ಷಕರು | ೨,೦೦೦.೦೦ |
| | ಕ್ರ.ಸಂ. ೧೫೯೪ ರಿಂದ ೧೫೯೫ರ ವರೆಗಿನ ವಿಳಾಸ<br>ಶ್ರೀ ಮಂಜುನಾಥ ಹೆಣ್ಣುಮಕ್ಕಳ ಪ್ರೌಢಶಾಲೆ,<br>ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೫೯೬. | ಶ್ರೀ ಬಿ.ಎಲ್. ತಿಮ್ಮಯ್ಯ<br>ನಂ. ೭೮೨, ೫ನೇ ಮುಖ್ಯರಸ್ತೆ, ವಿಜಯನಗರ,<br>ಬೆಂಗಳೂರು-೪೦. | ೨,೦೦೫.೦೦ |
| ೧೫೯೭. | ಶ್ರೀ ಜಿ. ಶಿವನಂಜಪ್ಪ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ.ಪ್ರೌ.ಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾ. | ೨,೦೦೦.೦೦ |
| ೧೫೯೮. | ಶ್ರೀ ಎಸ್. ಮೂರ್ತಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೫೯೯. | ಶ್ರೀ ಆರ್.ಬಿ. ರಂಗಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೦೦. | ಶ್ರೀ ಕೆ. ರಮೇಶ<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೫೯೮ ರಿಂದ ೧೬೦೦ರ ವರೆಗಿನ ವಿಳಾಸ<br>ಸಿ. ಗ್ರಾ. ಪ್ರೌಢಶಾಲೆ, ಬೂದಿಗೆರೆ, ದೇವಹಳ್ಳಿ ತಾ. | |
| ೧೬೦೧. | ಅಧ್ಯಕ್ಷರು,<br>ಅಖಿಲ ಭಾರತ ವೀರಶೈವ ಮಹಾಸಭಾ (ರಿ.,)<br>ಬಿನ್ನಿ ಪೇಟೆ ಘಟಕ, ೪೨ನೇ ತಿರುವು,<br>೯ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ<br>ಬೆಂಗಳೂರು-೪೦. | ೧,೦೦೦.೦೦ |
| ೧೬೦೨. | ಶ್ರೀ ಮಹಾಂತೇಶ<br>ಮಾಲೀಕರು,<br>ಕಾವ್ಯಶ್ರೀ ಪ್ಲಾಸ್ಟಿಕ್, ನಂ. ೩೫, ೫ನೇ ಕ್ರಾಸ್,<br>ದೊಡ್ಡಣ್ಣ ಇಂಡಸ್ಟ್ರೀಯಲ್ ಎಸ್ಟೇಟ್ ಮುಖ್ಯರಸ್ತೆ,<br>ಪೀಣ್ಯ ೨ನೇ ಹಂತ,<br>ಬೆಂಗಳೂರು-೯೧. | ೫,೦೦೧.೦೦ |
| ೧೬೦೩. | ಶ್ರೀ ಬಿ.ಆರ್. ಶಿವಣ್ಣ<br>ನಿವೃತ್ತ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್,<br>ಆರ್.ಪಿ.ಸಿ. ಲೇ ಔಟ್, ವಿಜಯನಗರ,<br>ಬೆಂಗಳೂರು-೪೦. | ೧,೦೦೧.೦೦ |
| ೧೬೦೪. | ಶ್ರೀಮತಿ ನಂಜಮ್ಮ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಹಿರಿಯ ಪ್ರಾಥಮಿಕ ಶಾಲೆ,<br>ಶಿವನಹಳ್ಳಿ, ಬೆಂಗಳೂರು-೧೦. | ೧,೦೦೦.೦೦ |
| ೧೬೦೫. | ಶ್ರೀ ರಾಮಕೃಷ್ಣಯ್ಯ<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಶಿವನಹಳ್ಳಿ, ಬೆಂಗಳೂರು-೧೦. | ೨,೦೦೧.೦೦ |
| ೧೬೦೬. | ಶ್ರೀ ಎಸ್. ನಂದೀಶಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಹಾಲನೂರು, ತುಮಕೂರು ತಾ. | ೨,೦೦೧.೦೦ |
| ೧೬೦೭. | ಶ್ರೀ ಕೆ.ಎ. ತಿಮ್ಮಾಚಾರಿ<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾ. | ೨,೦೦೧.೦೦ |
| ೧೬೦೮. | ಶ್ರೀ ಆರ್.ಜಿ. ಪರಮೇಶ್ವರಪ್ಪ<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಗ್ರಾ. ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾ. | ೨,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೬೦೯. | ಶ್ರೀಮತಿ ಶಾಲಿನಿ ಬಸವನಾಥ ರಾವಳೆ<br>ಸಹ ಶಿಕ್ಷಕರು | ೧,೦೦೦.೦೦ |
| ೧೬೧೦. | ಶ್ರೀ ಸಿ.ಎಸ್. ಜೈಶಂಕರ್<br>ಸಹ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೧೬೦೯ ರಿಂದ ೧೬೧೦ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌ. ಶಾಲೆ, ನಾರಸಂದ್ರ, ಮಾಗಡಿ ತಾ. | |
| ೧೬೧೧. | ಶ್ರೀ ಶಿವಕುಮಾರಸ್ವಾಮಿ<br>ದ್ವಿ.ದ.ಸ.<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾ. | ೨,೦೦೦.೦೦ |
| ೧೬೧೨. | ಶ್ರೀಮತಿ ಶಕುಂತಲಮ್ಮ ಬಿನ್ ಸುಗ್ಗಪ್ಪ<br>ನಾಗರಗುಂಡ ಅಂಚೆ, ದೇವದುರ್ಗ ತಾ.<br>ರಾಯಚೂರು ಜಿಲ್ಲೆ. | ೪,೦೦೦.೦೦ |
| ೧೬೧೩. | ಶ್ರೀಮತಿ ಕುಸುಮ ಗುರುದೇವ<br>'ಗುರುಕೃಪ', ನಂ. ೪೭/೩೭,<br>೧೦ನೇ ಮುಖ್ಯರಸ್ತೆ, ಆರ್.ಎಂ.ವಿ. ಬಡಾವಣೆ,<br>ಬೆಂಗಳೂರು– ೮೦. | ೨,೦೦೧.೦೦ |
| ೧೬೧೪. | ಶ್ರೀ ಕೆ. ಓಂಕಾರಪ್ಪ<br>ಸಹ ಶಿಕ್ಷಕರು,<br>ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಹಿರಿಯೂರು ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ. | ೨,೦೦೧.೦೦ |
| ೧೬೧೫. | ಶ್ರೀಮತಿ ಜಯಮ್ಮ<br>ದ್ವಿ.ದ.ಸ. | ೧,೦೦೧.೦೦ |
| ೧೬೧೬. | ಶ್ರೀ ಲಿಂಗದೇವರು<br>ದ್ವಿ.ದ.ಸ. | ೧,೦೦೧.೦೦ |
| | ಕ್ರ.ಸಂ. ೧೬೧೫ ರಿಂದ ೧೬೧೬ರ ವರೆಗಿನ ವಿಳಾಸ<br>ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು ತಾಲ್ಲೂಕು. | |
| ೧೬೧೭. | ಶ್ರೀ ಕೆ. ಕಂಚೀರಾಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೧೮. | ಶ್ರೀ ಎಸ್. ಈಶ್ವರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೧೬೧೯. | ಶ್ರೀ ಎಸ್.ಆರ್. ನಟರಾಜು<br>ಸಹ ಶಿಕ್ಷಕರು | ೧,೦೦೧.೦೦ |
| ೧೬೨೦. | ಶ್ರೀ ನರಸಿಂಹಮೂರ್ತಿ<br>ದ್ವಿ.ದ.ಸ. | ೧,೦೦೧.೦೦ |
| | ಕ್ರ.ಸಂ. ೧೬೧೭ ರಿಂದ ೧೬೨೦ರ ವರೆಗಿನ ವಿಳಾಸ<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | |
| ೧೬೨೧. | ಶ್ರೀ ಬಿ. ಶೇಖರಪ್ಪ<br>ದೈಹಿಕ ಶಿಕ್ಷಕರು,<br>ಬೆಳದರ ಪ್ರೌಢಶಾಲೆ, ಬೆಳದರ,<br>ತುಮಕೂರು ತಾಲ್ಲೂಕು. | ೧,೦೦೧.೦೦ |
| ೧೬೨೨. | ಶ್ರೀ ಗಂಗಾಧರಯ್ಯ<br>ಪ್ರ.ಶಾ.ಸ. | ೨,೦೦೦.೦೦ |
| ೧೬೨೩. | ಶ್ರೀ ಹೆಚ್.ಕೆ. ರಂಗಯ್ಯ<br>'ಡಿ' ಗ್ರೂಪ್ ನೌಕರರು | ೨,೦೦೦.೦೦ |
| | ಕ್ರ.ಸಂ. ೧೬೨೨ ರಿಂದ ೧೬೨೩ರ ವರೆಗಿನ ವಿಳಾಸ<br>ಶ್ರೀ ಗಂಗಾಧರೇಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಆನೇಕೆರೆ, ತುರುವೇಕೆರೆ ತಾಲ್ಲೂಕು. | |
| ೧೬೨೪. | ಶ್ರೀಮತಿ ಜಯಮ್ಮ ಮುದ್ದರಂಗಯ್ಯ<br>ನಂ. ೯೭೮/ಎ, ೪ನೇ 'ಈ' ಬ್ಲಾಕ್,<br>೧೦ನೇ 'ಬಿ' ಮುಖ್ಯರಸ್ತೆ, ೬೦ನೇ ಕ್ರಾಸ್,<br>ರಾಜಾಜಿನಗರ, ಬೆಂಗಳೂರು-೧೦. | ೨,೨೦೧.೦೦ |
| ೧೬೨೫. | ಶ್ರೀ ಗಣಪತಿ ಅನಂತಭಟ್ಟ<br>ಸಹ ಪ್ರಾಧ್ಯಾಪಕರು | ೨,೦೦೧.೦೦ |
| ೧೬೨೬. | ಶ್ರೀ ಸೋ. ನರಸಿಂಹ<br>ಪ್ರಾಧ್ಯಾಪಕರು | ೨,೦೦೧.೦೦ |
| | ಕ್ರ.ಸಂ. ೧೬೨೫ ರಿಂದ ೧೬೨೬ರ ವರೆಗಿನ ವಿಳಾಸ<br>ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು,<br>ಶ್ರೀ ಸಿದ್ಧಗಂಗಾ ಮಠ. | |
| ೧೬೨೭. | ಶ್ರೀ ಕೆ.ಸಿ. ಹನುಮಂತರಾಯ<br>ಸೇವಕರು,<br>ಶ್ರೀ ಸಿ. ಪ.ಪೂ. ಕಾಲೇಜು,<br>(ಪ್ರೌಢಶಾಲಾ ವಿಭಾಗ),<br>ತುಮಕೂರು-೨. | ೨,೦೦೧.೦೦ |
| ೧೬೨೮. | ಶ್ರೀ ಬಿ.ವಿ. ಷಡಾಕ್ಷರಯ್ಯ<br>ಸೇವಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೬೨೯. | ಶ್ರೀ ಬಿ.ಜಿ. ಚೆನ್ನಮಲ್ಲಿಕಾರ್ಜುನ<br>ಪ್ರ.ಶಾ.ಸ.<br>ಶ್ರೀ ಸಿ. ಗ್ರಾ. ಪ್ರೌ. ಶಾಲೆ,<br>ಆದಲಗೆರೆ, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೬೩೦. | ಶ್ರೀ ಬಿ.ವಿ. ಶಿವಕುಮಾರ್<br>ಬಿನ್ ಲೇಟ್ ವೀರಭದ್ರಯ್ಯ,<br>ನಂ. ೧೪, ಎಲೇಚೆನಹಳ್ಳಿ, ಜೆ.ಪಿ. ನಗರ ಪೋಸ್ಟ್,<br>ಕನಕಪುರ ರಸ್ತೆ, ಬೆಂಗಳೂರು–೭೮. | ೫,೦೦೧.೦೦ |

*(ಮುಂದುವರೆಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೦೭. | ಶ್ರೀ ವಿ. ಮುರಳಿ<br>ನಂ. ೧೮೦/೧, ಹೊಸೂರು ರಸ್ತೆ,<br>೨ನೇ ಕ್ರಾಸ್, ವಿಶ್ವನಿಡಂ ಗಾರ್ಡನ್,<br>ಬೆಂಗಳೂರು – ೫೬೦ ೦೨೭. | ೧,೦೦೧.೦೦ |
| ೧೨೦೮. | ಶ್ರೀ ಬಿ.ಎಂ. ವಿರೂಪಾಕ್ಷಯ್ಯ<br>ಹಿಂದಿ ಶಿಕ್ಷಕರು,<br>ಶ್ರೀ ಹುತ್ತ ಸಿದ್ಧೇಶ್ವರ ಗ್ರಾ. ಪ್ರೌಢಶಾಲೆ,<br>ಮಾದಿಹಳ್ಳಿ, ತುರುವೇಕೆರೆ ತಾ. | ೧,೦೦೧.೦೦ |
| ೧೨೦೯. | ಶ್ರೀ ಕೆ.ಎನ್. ವೆಂಕಟಾಚಲಪತಿ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೦. | ಶ್ರೀಮತಿ ರೇಣುಕಾಂಬ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೧. | ಶ್ರೀ ಟಿ.ಪಿ. ಪ್ರಭು<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೧೨೧೨. | ಶ್ರೀ ದೊಡ್ಡಬಸಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೩. | ಶ್ರೀ ಕೆ.ಆರ್. ಶಿವಗಂಗಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೪. | ಶ್ರೀಮತಿ ಆರ್. ಶೈಲಜಾಕುಮಾರಿ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೧೨೧೫. | ಶ್ರೀ ಕೆ.ಪಿ. ಜಯಣ್ಣ<br>ಚಿತ್ರಕಲಾ ಶಿಕ್ಷಕರು | ೧,೦೦೧.೦೦ |
| ೧೨೧೬. | ಶ್ರೀ ಕೆ.ಬಿ. ರಾಜಶೇಖರಯ್ಯ<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |
| ೧೨೧೭. | ಶ್ರೀ ಕೆ.ಹೆಚ್. ವೇದಮೂರ್ತಿ<br>ದೈಹಿಕ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೧೨೦೯ ರಿಂದ ೧೨೧೭ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಸಂ.ಪ.ಪೂರ್ವ ಕಾಲೇಜು,<br>ಪ್ರೌಢಶಾಲಾ ವಿಭಾಗ, ಬಿ.ಹೆಚ್. ರಸ್ತೆ, ತುಮಕೂರು– ೫೭೨ ೧೦೨. | |
| ೧೨೧೮. | ಶ್ರೀ ಎನ್. ಬಸವರಾಜಪ್ಪ<br>ಪ್ರ. ಶಿಕ್ಷಕರು | ೧,೦೦೧.೦೦ |
| ೧೨೧೯. | ಶ್ರೀ ಹೆಚ್.ಎಸ್. ನೀಲಕಂಠಯ್ಯ<br>ಚಿತ್ರಕಲಾ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೧೨೧೮ ರಿಂದ ೧೨೧೯ರ ವಿಳಾಸಗಳು<br>ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು– ೪. | |
| ೧೨೨೦. | ಶ್ರೀ ಮಾರುತಿ<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾ. | ೧,೦೦೧.೦೦ |
| ೧೨೨೧. | ಶ್ರೀ ಆರ್.ಎಂ. ರಾಜಸುಲೋಚನ<br>ಪ್ರ. ಶಿಕ್ಷಕರು,<br>ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು. | ೧,೦೦೧.೦೦ |
| ೧೨೨೨. | ಶ್ರೀ ಬಿ.ವಿ. ರಾಮಸ್ವಾಮಿ<br>ಲೇಟ್ ಶ್ರೀ ಪಿ. ವೆಂಕಟೇಶಯ್ಯ,<br>ಗೋವಿಂದಪುರ,<br>ಅರೇಬಿಕ್ ಕಾಲೇಜು ಅಂಚೆ,<br>ಬೆಂಗಳೂರು– ೫೬೦ ೦೪೫. | ೧,೦೦೧.೦೦ |
| ೧೨೨೩. | ಶ್ರೀಮತಿ ಲಕ್ಷ್ಮಮ್ಮನವರು<br>'ಡಿ' ಗ್ರೂಪ್ ನೌಕರರು,<br>ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ,<br>ನೆಲಮಂಗಲ, ಬೆಂ. ಗ್ರಾ. ಜಿಲ್ಲೆ. | ೧,೦೦೧.೦೦ |
| ೧೨೨೪. | ಶ್ರೀಮತಿ ಕೆ.ಎಸ್. ಮಮತ<br>ಪ್ರ.ಶಾ.ಸ.<br>ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ,<br>ನೆಲಮಂಗಲ ಟೌನ್,<br>ಬೆಂಗಳೂರು ಗ್ರಾ. ಜಿಲ್ಲೆ. | ೧,೦೦೧.೦೦ |
| ೧೨೨೫. | ಶ್ರೀ ರಮೇಶ ರಾಜಶೇಖರ ಬಿಳಗಿ<br>ಪ್ರಾಂಶುಪಾಲರು | ೧,೦೦೧.೦೦ |
| ೧೨೨೬. | ಶ್ರೀ ಬಿ.ಕೆ. ಪುಟ್ಟಸ್ವಾಮಯ್ಯ<br>ಉಪನ್ಯಾಸಕರು | ೧,೦೦೧.೦೦ |
| ೧೨೨೭. | ಶ್ರೀ ಬಸವರಾಜು<br>ಉಪನ್ಯಾಸಕರು | ೧,೦೦೧.೦೦ |
| ೧೨೨೮. | ಶ್ರೀ ಧರ್ಮಪಾಲ<br>ಉಪನ್ಯಾಸಕರು | ೧,೦೦೧.೦೦ |
| ೧೨೨೯. | ಶ್ರೀ ಕೃಷ್ಣಪ್ಪ<br>ಉಪನ್ಯಾಸಕರು | ೧,೦೦೧.೦೦ |
| ೧೨೩೦. | ಶ್ರೀ ಎಸ್.ಬಿ. ರವೀಶ್<br>ಉಪನ್ಯಾಸಕರು | ೧,೦೦೧.೦೦ |
| ೧೨೩೧. | ಶ್ರೀ ಜೆ.ಸಿ. ನಾಗರಾಜು<br>ದ್ವಿ.ದ.ಸ. | ೧,೦೦೧.೦೦ |
| | ಕ್ರ.ಸಂ. ೧೧೨೫ ರಿಂದ ೧೧೩೧ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಸಂ. ಪ. ಪೂರ್ವ ಕಾಲೇಜು,<br>ಹಾಲನೂರು, ತುಮಕೂರು ತಾಲ್ಲೂಕು. | |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೩೨. | ಶ್ರೀಮತಿ ಕೆ.ಜಿ. ಶಕುಂತಲಮ್ಮ<br>ಕನ್ನಡ ಶಿಕ್ಷಕರು | ೧,೦೦೧.೦೦ |
| ೧೨೩೩. | ಶ್ರೀ ಆರ್. ರಾಮಚಂದ್ರ<br>ಹಿಂದಿ-ಶಿಕ್ಷಕರು | ೧,೦೦೧.೦೦ |
| ೧೨೩೪. | ಶ್ರೀ ಎಸ್. ಪರಮೇಶಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೫. | ಶ್ರೀ ಬಿ.ಎನ್. ಗೋವಿಂದರಾಜಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೬. | ಶ್ರೀ ಡಿ. ಮೈಲಾರಪ್ಪ<br>ವೃತ್ತಿ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೧೨೩೨ ರಿಂದ ೧೨೩೬ರ ವಿಳಾಸಗಳು<br>ಶ್ರೀ ರಂಗನಾಥ ಗ್ರಾ. ಪ್ರೌಢಶಾಲೆ, ನೇರಳೆಕೆರೆ,<br>ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | |
| ೧೨೩೭. | ಶ್ರೀ ಸಿ. ಬಾಳೇಗೌಡ<br>ಆರ್ಕಿಟೆಕ್ಟ್ ಮತ್ತು ಇಂಜಿನಿಯರ್,<br>ನಂ. ೧೪, 'ಶಿವಕೃಪ', ಸೋಮೇಶ್ವರನಗರ,<br>ಜಿಕೆವಿಕೆ ಅಂಚೆ, ಯಲಹಂಕ ಉಪನಗರ,<br>ಬೆಂಗಳೂರು – ೬೫. | ೧,೦೦೧.೦೦ |
| ೧೨೩೮. | ಶ್ರೀ ಆರ್.ಎಸ್. ಹುಚ್ಚಾಚಾರಿ<br>ವಿಶೇಷಾಧಿಕಾರಿಗಳು,<br>ಸಹಕಾರ ಇಲಾಖೆ, ಎಂ.ಎಸ್. ಬಿಲ್ಡಿಂಗ್,<br>೬ನೇ ಮಹಡಿ, ಬೆಂಗಳೂರು-೧. | ೧,೦೦೧.೦೦ |
| ೧೨೩೯. | ಶ್ರೀ ರಾಜಶೇಖರಯ್ಯ<br>೫ನೇ ಕ್ರಾಸ್, ಪಿ.ಜಿ. ಬಡಾವಣೆ,<br>ಹೊಸಕೋಟೆ – ೫೬೨೧೧೪. | ೧,೦೦೧.೦೦ |
| ೧೨೪೦. | ಶ್ರೀ ಎಸ್. ಪ್ರಸಾದ್<br>ಸಹ ಶಿಕ್ಷಕರು | ೧,೦೦೧.೦೦ |
| ೧೨೪೧. | ಶ್ರೀ ಪಿ.ಎಸ್. ಮಲ್ಲಿಕಾರ್ಜುನ ರಾಯಲ್<br>ಸಹ ಶಿಕ್ಷಕರು | ೧,೦೦೧.೦೦ |
| ೧೨೪೨. | ಶ್ರೀ ಆರ್. ನಂಜಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೪೩. | ಶ್ರೀ ಸಿ.ವಿ. ಬಸವರಾಜು<br>ಸಹ ಶಿಕ್ಷಕರು | ೧,೦೦೧.೦೦ |
| ೧೨೪೪. | ಶ್ರೀಮತಿ ಕೆ.ಎಸ್. ಲಲಿತಾಂಬ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೧೨೪೫. | ಶ್ರೀ ಕೆ.ಎಸ್. ಕುಮಾರಸ್ವಾಮಿ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೧೨೪೬. | ಶ್ರೀಮತಿ ಜಯಮ್ಮ<br>ದ್ವಿ.ದ.ಸ. | ೧,೦೦೧.೦೦ |
| ೧೨೪೭. | ಶ್ರೀಮತಿ ಕೆ. ಲಕ್ಷ್ಮೀ<br>ದ್ವಿ.ದ.ಸ. | ೧,೦೦೧.೦೦ |
| ೧೨೪೮. | ಶ್ರೀ ಕೆ.ಎಸ್. ನರಸಿಂಹಯ್ಯ<br>ಪ್ರ.ಶಾ.ಸ. | ೧,೦೦೧.೦೦ |
| ೧೨೪೯. | ಶ್ರೀ ಬಿ. ಶಿವಲಿಂಗಯ್ಯ<br>'ಡಿ' ಗ್ರೂಪ್ ನೌಕರರು | ೧,೦೦೧.೦೦ |
| ೧೨೫೦. | ಶ್ರೀ ರಂಗನಾಥ್<br>'ಡಿ' ಗ್ರೂಪ್ ನೌಕರರು | ೧,೦೦೧.೦೦ |
| | ಕ್ರ.ಸಂ. ೧೧೪೦ ರಿಂದ ೧೨೫೦ರ ವಿಳಾಸಗಳು<br>ಬೆಳದರ ಗ್ರಾ. ಪ್ರೌಢಶಾಲೆ, ಬೆಳದರ,<br>ತುಮಕೂರು ತಾಲ್ಲೂಕು. | |
| ೧೨೫೧. | ಶ್ರೀ ಕೆ. ನಾಗರಾಜ್<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಆರೆಯೂರು ತುಮಕೂರು ಜಿಲ್ಲೆ. | ೧,೦೦೧.೦೦ |
| ೧೨೫೨. | ಶ್ರೀ ಓಂಕಾರಮೂರ್ತಿ<br>ವೃತ್ತಿ ಶಿಕ್ಷಕರು,<br>ಶ್ರೀ ಹತ್ತ ಸಿದ್ಧೇಶ್ವರ ಗ್ರಾ. ಪ್ರೌಢಶಾಲೆ,<br>ಮಾದಿಹಳ್ಳಿ, ತುರುವೇಕೆರೆ ತಾ. | ೧,೦೦೦.೦೦ |
| ೧೨೫೩. | ಶ್ರೀ ಡಿ. ಚಂದ್ರಶೇಖರಯ್ಯ<br>ನಂ. ೨೮, ಅಪ್ಪರಾಯಪ್ಪ ಲೇನ್<br>ನಗರ್ತಪೇಟೆ, ಬೆಂಗಳೂರು – ೨. | ೧,೦೦೧.೦೦ |
| ೧೨೫೪. | ಶ್ರೀ ಬಿ. ಸೋಮರೆಡ್ಡಿ<br>ಬಿ.ಎಂ. ನೂಗೂರು ಮತ್ತು ಅಂಚೆ<br>ಸಿರಗುಪ್ಪೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ೧,೦೧೧.೦೦ |
| ೧೨೫೫. | ಶ್ರೀ ಲಕ್ಷ್ಮೀಪತಿ ಬಿನ್ ತಿಮ್ಮಣ್ಣ<br>(ರಂಗಶ್ಯಾಮಣ್ಣ)<br>ಸಿದ್ಧಾಪುರ, ಮಧುಗಿರಿ ತಾಲ್ಲೂಕು,<br>ಸಿದ್ಧಾಪುರ ಅಂಚೆ, ತುಮಕೂರು ತಾ. | ೧,೦೦೫.೦೦ |
| ೧೨೫೬. | ಶ್ರೀಮತಿ ಎಸ್. ಅನುಸೂಯಮ್ಮ<br>ಪ್ರಾಂಶುಪಾಲರು | ೧,೦೦೦.೦೦ |
| ೧೨೫೭. | ಶ್ರೀಮತಿ ಎಸ್. ಸುಮಂಗಳಮ್ಮ<br>ಉಪನ್ಯಾಸಕರು | ೧,೦೦೨.೦೦ |
| ೧೨೫೮. | ಡಾ. ಆರ್. ನಂಜಯ್ಯ<br>ಉಪನ್ಯಾಸಕರು | ೧,೦೦೨.೦೦ |
| ೧೨೫೯. | ಶ್ರೀ ಹೆಚ್.ವಿ. ತೇರುಮಲ್ಲಪ್ಪ<br>ಉಪನ್ಯಾಸಕರು | ೧,೦೦೨.೦೦ |
| | ಕ್ರ.ಸಂ. ೧೨೫೬ ರಿಂದ ೧೨೫೯ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಮಹಿಳಾ ಕಾಲೇಜು,<br>ತುಮಕೂರು. | |

(ಮುಂದುವರೆಯುತ್ತದೆ)

RNI No. 17139/69

"Siddaganga" Monthly - Postal Reg. No. KA/SK/TMR/385/2003-05

# ಸಿದ್ಧಗಂಗಾ 2005

॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



## ಜನವರಿ

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | 31 | 3 | 10• | 17 | 24 |
| ಮಂ | * | 4 | 11 | 18 | 25° |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | 29 |

## ಫೆಬ್ರವರಿ

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1 | 8• | 15 | 22 | * |
| ಬು | 2 | 9 | 16 | 23 | * |
| ಗು | 3 | 10 | 17 | 24° | * |
| ಶು | 4 | 11 | 18 | 25 | * |
| ಶ | 5 | 12 | 19 | 26 | * |

## ಮಾರ್ಚ್

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1 | 8 | 15 | 22 | 29 |
| ಬು | 2 | 9 | 16 | 23 | 30 |
| ಗು | 3 | 10• | 17 | 24 | 31 |
| ಶು | 4 | 11 | 18 | 25° | * |
| ಶ | 5 | 12 | 19 | 26 | * |

## ಏಪ್ರಿಲ್

| | | | | | |
|---|---|---|---|---|---|
| ಭಾ | * | 3 | 10 | 17 | 24° |
| ಸೋ | * | 4 | 11 | 18 | 25 |
| ಮಂ | * | 5 | 12 | 19 | 26 |
| ಬು | * | 6 | 13 | 20 | 27 |
| ಗು | * | 7 | 14 | 22 | 28 |
| ಶು | 1 | 8• | 15 | 22 | 29 |
| ಶ | 2 | 9 | 16 | 23 | 30 |

## ಮೇ

| | | | | | |
|---|---|---|---|---|---|
| ಭಾ | 1 | 8• | 15 | 22 | 29 |
| ಸೋ | 2 | 9 | 16 | 23° | 30 |
| ಮಂ | 3 | 10 | 17 | 24 | 31 |
| ಬು | 4 | 11 | 18 | 25 | * |
| ಗು | 5 | 12 | 19 | 26 | * |
| ಶು | 6 | 13 | 20 | 27 | * |
| ಶ | 7 | 14 | 21 | 28 | * |

## ಜೂನ್

| | | | | | |
|---|---|---|---|---|---|
| ಭಾ | * | 5 | 12 | 19 | 26 |
| ಸೋ | * | 6• | 13 | 20 | 27 |
| ಮಂ | * | 7 | 14 | 21 | 28 |
| ಬು | 1 | 8 | 15 | 22° | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | * |
| ಶ | 4 | 11 | 18 | 25 | * |

## ಜುಲೈ

| | | | | | |
|---|---|---|---|---|---|
| ಭಾ | 31 | 3 | 10 | 17 | 24 |
| ಸೋ | * | 4 | 11 | 18 | 25 |
| ಮಂ | * | 5 | 12 | 19 | 26 |
| ಬು | * | 6• | 13 | 20 | 27 |
| ಗು | * | 7 | 14 | 21° | 28 |
| ಶು | 1 | 8 | 15 | 22 | 29 |
| ಶ | 2 | 9 | 16 | 23 | 30 |

## ಆಗಸ್ಟ್

| | | | | | |
|---|---|---|---|---|---|
| ಭಾ | * | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | 31 |
| ಗು | 4• | 11 | 18 | 25 | * |
| ಶು | 5• | 12 | 19° | 26 | * |
| ಶ | 6 | 13 | 20 | 27 | * |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾ | * | 4 | 11 | 18° | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3• | 10 | 17 | 24 | * |

## ಅಕ್ಟೋಬರ್

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | 31 | 3• | 10 | 17° | 24 |
| ಮಂ | * | 4 | 11 | 18 | 25 |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | 29 |

## ನವೆಂಬರ್

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1• | 8 | 15° | 22 | 29 |
| ಬು | 2 | 9 | 16 | 23 | 30 |
| ಗು | 3 | 10 | 17 | 24 | * |
| ಶು | 4 | 11 | 18 | 25 | * |
| ಶ | 5 | 12 | 19 | 26 | * |

## ಡಿಸೆಂಬರ್

| | | | | | |
|---|---|---|---|---|---|
| ಭಾ | * | 4 | 11 | 18 | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1• | 8 | 15° | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | 31• |

Printed at: ***Geetanjali Graphic*** #4, M.S.R. Indl Estate, Gokul Extn. Bangalore - 54. Ph: 23604087